ಐದನೇ ವರುಷದ ಒಂದನೇ ಪುಷ್ಪ

# ಮಾತೃಶ್ರೀ

(ಕಾದಂಬರಿ)

ಬರೆದವರು : ಸಿ. ಎಂ. ವಿ. ಶರ್ಮ ಬಿ. ಎ.

ಸರ್ವೋದಯ ಸಾಹಿತ್ಯಮಾಲೆ, ಹುಬ್ಬಳ್ಳಿ

ಪ್ರ ಕಾ ಶ ಕ ರು :
ಎಂ. ಎಚ್. ರಾವ್
ಸರ್ವೋದಯ ಸಾಹಿತ್ಯಮಾಲೆ
ಹು ಬ್ಬ . ಳ್ಳಿ

ಮು ದ್ರ ಕ ರು :
ಎಸ್. ವ್ಹಿ. ಶ್ರೇಷ್ಠಿ
ರಾಯಲ್ ಪ್ರಿಂಟಿಂಗ್ ಪ್ರೆಸ್
ಹು ಬ್ಬ ಳ್ಳಿ

ಮೊದಲನೇಯ ಆವೃತ್ತಿ
೧೫, ಅಗಸ್ಟ್, ೧೯೫೨

ಬೆಲೆ: ೧—೪—೦

# ಪ್ರಕಾಶಕರ ಅರಿಕೆ

ಇದೇ ೧೫, ಅಗಸ್ಟ್ ೧೯೫೨ ರಿಂದ ಸರ್ವೋದಯ ಸಾಹಿತ್ಯಮಾಲೆಯು ತನ್ನ ಐದನೇ ವರುಷಕ್ಕೆ ಕಾಲಿಟ್ಟಿದೆ. ಈ ನೂತನ ವರುಷದ ಮೊದಲನೇ ಕಾಣಿಕೆಯಾಗಿ "**ಮಾತೃಶ್ರೀ**" ಎಂಬ ಸಾಮಾಜಿಕ ಕಾದಂಬರಿಯನ್ನು ಪ್ರಕಟಿಸಿರುವೆವು. ಇದನ್ನು ಗ್ರಂಥಮಾಲೆಗೆ ಕೊಟ್ಟ ದಾವಣಗೆರೆಯ **ಶ್ರೀ ಶರ್ಮ**ರವರಿಗೆ ಅನಂತ ಕೃತಜ್ಞತೆಗಳು.

ಗ್ರಂಥಮಾಲೆಯು ನಾಲ್ಕು ವರುಷಗಳನ್ನು ದಾಟಿ ಬಂದಿದೆ. ಈ ಅವಧಿಯಲ್ಲಿ ಅನುಭವಿಸಿದ ಕಷ್ಟ ನಷ್ಟಗಳು ಬಹಳ. ಆರ್ಥಿಕ ಮುಗ್ಗಟ್ಟು ಇನ್ನೂ ಹೆಚ್ಚಾಗುವ ಚಿಹ್ನೆಗಳೇ ಕಾಣಿಸುತ್ತಿವೆ. ಆದುದರಿಂದ ಸಾಧ್ಯವಿದ್ದವರು ಗ್ರಂಥಮಾಲೆಗೆ ಕೊಡುಗೈಯಿಂದ ಸಹಾಯ ನೀಡಬೇಕಾಗಿ ಅರಿಕೆ. ಸಹಾಯ ಸಂಪತ್ತು ದೊರೆತರೆ ಉತ್ತಮ, ದೊಡ್ಡ ಹಾಗೂ ಸರ್ವಾಂಗ ಸುಂದರವಾದ ಸಾಹಿತ್ಯ ಕೃತಿ ರತ್ನಗಳನ್ನು ಆರಿಸಿಕೊಡಲು ಅನುಕೂಲವಾಗುತ್ತದೆ. ದೇವರು ಎಲ್ಲರಿಗೂ ಅಂತಹ ಬುದ್ಧಿಯನ್ನು ಕೊಡಲೆಂದು ಪ್ರಾರ್ಥಿಸುತ್ತೇವೆ.

—ಪ್ರಕಾಶಕ

## ಮುಂದಿನ ಪುಷ್ಪಗಳು

**೧) ಕಾವ್ಯದ ಕಾರಖಾನೆ**

(ಏಕಾಂಕ ನಾಟಕಗಳ ಸಂಗ್ರಹ)

ಬರೆದವರು : **“ಎನ್ಕೆ”**

೧೫, ನವಂಬರ್ ೧೯೫೨ ಕ್ಕೆ

ಅಂದವಾದ ಕಾಗದ

ಸುಂದರ ಹೊದಿಕೆ

ತೊಂದರೆಯೆನಿಸದ ಬೆಲೆ

**೨) ಕೈ ಹಿಡಿದ ಕಾವೇರಿ**

ಸಾಮಾಜಿಕ ಕಾದಂಬರಿ

# ಮಾತೃಶ್ರೀ

ನಾರಾಯಣರಾಯರು ಊಟ ಮುಗಿಸಿ, ಬಿಳುಪೇರಿ ಬೆಳ್ಳಿಯಂತಿದ್ದ ನೀಳವಾದ ಮೀಸೆಗಳನ್ನು ಒರಸುತ್ತಾ ಹೊರಾಂಗಣಕ್ಕೆ ಬಂದು ಬೆಂಚೇರಿ ಕುಳಿತರು. ನುಣ್ಣಗೆ ಪಟ್ಟು ಹಿಡಿದಿದ್ದ ತಲೆಯ ಮೇಲೊಮ್ಮೆ ಕೈಯಾಡಿಸಿ ಪೂರ್ಣ ತೃಪ್ತಿಯ ತೇಗೊಂದನ್ನು ಗುಟುರಿದರು. ಹಿಂದೆಯೇ ಶಂಕರಮ್ಮ ಸಣ್ಣ ತಟ್ಟೆಯಲ್ಲಿ ತಾಂಬೂಲವನ್ನು ತಂದಿಟ್ಟಳು. ಆಕೆಯೂ ಸುಮಾರು ಅವರಷ್ಟೇ ವಯಸ್ಸಿನವರಂತೆ ಕಾಣುತ್ತಿದ್ದರು. ತಲೆಯ ಮೇಲಿನ ಕೂದಲುಗಳು ಶುಭ್ರ ಬಿಳಿಯ ಬಣ್ಣ ಹೊಂದಿದ್ದುವು. ಮುಖದ ಮೇಲೆ ವೃದ್ಧಾಪ್ಯದ ಗೆರೆಗಳು ಆಗಲೇ ಕಾಣುತ್ತಿದ್ದುವು. ಹಣೆಯಗಲಕ್ಕೂ ದೊಡ್ಡ ಕುಂಕುಮದ ಬೊಟ್ಟು. ಕೆನ್ನೆಯಷ್ಟೂ ಅರಸಿನ ವರ್ಣ. ಕಿವಿಯಲ್ಲಿ ಕೆಂಪು ಹರಳಿನ ಬೆಂಡೋಲೆಗಳು ತೂಗುತ್ತಿದ್ದುವು. ಎಲ್ಲಕ್ಕೂ ಹಿರಿದಾಗಿ ಮೂಗಿನ ನತ್ತು ಹೆಚ್ಚು ಕಳೆಯೇರಿತ್ತು. ಒಟ್ಟಿನಲ್ಲಿ ನಾರಾಯಣರಾಯರಿಗಿಂತಲೂ ಶಂಕರಮ್ಮನವರೇ ಹೆಚ್ಚು ವಯಸ್ಸಿನವರಂತೆ ಕಾಣುತ್ತಿದ್ದರು. ನಾರಾಯಣರಾಯರು ವೃದ್ಧಾಪ್ಯದ ಹಾದಿಯಲ್ಲಿ ಇದ್ದರೂ ಮುಖದಲ್ಲಿ ಹೆಚ್ಚಿನ ಗಾಂಭೀರ್ಯ, ಶ್ರೀಮಂತಿಕೆಯ ದರ್ಪ, ಸಂಭಾವಿಕತೆ ಎದ್ದು ಕಾಣುತ್ತಿದ್ದುವು. ಎಲೆಯಡಿಕೆ ಜಗಿಯುತ್ತಾ, ರಾಯರು ಬಾಗಿಲಿಗೆ ಒರಗಿ ನಿಂತಿದ್ದ ಪತ್ನಿಯನ್ನೊಮ್ಮೆ ನೋಡಿ, “ಇನ್ನೇನು ಶಂಕರಿ, ಜಯರಾಮ ಇಂದೋ ನಾಳೆಯೋ ಬರುತ್ತಾನೆ ಅಂತ ಕಾಣುತ್ತೆ. ಪರೀಕ್ಷೆ ಮೊನ್ನೆ ಮುಗಿಯಿತಂತೆ” ಎಂದರು. ಶಂಕರಮ್ಮನ ಮುಖದಲ್ಲಿ ತುಸು ಗೆಲುವಾಡಿತು. “ಸದ್ಯ ವಂಶಕ್ಕೆ ಒಂದು ಕುಡಿಯಾದರೂ ಕಾಲೇಜು ಮೆಟ್ಟಲೇರಿತಲ್ಲ. ದೇವರು ದಯ ತೋರಿದ” ಎಂದಳು. “ಆವನು ಕಾಲೇಜು ಏರೋದರಲ್ಲಿ ನಮ್ಮ ಗತಿ ನೋಡಲೇ ಇಲ್ಲವಲ್ಲ” ಎಂದರು

ರಾಯರು ಹುಸಿನಗುತ್ತಾ. "ಪಾಪ, ಬಹಳ ಧರ್ಮದ ಕೆಲಸ ಮಾಡಿದಿರಿ ಅಲ್ಲವೇ ? ಯಾರಿಗೋ ನೀವು ಖರ್ಚು ಮಾಡಿದ್ದು! ಯಾವುದೋ ಪರದೇಶಿಯೋ, ಭಿಕನಾಶಿಯೋ ಅಂತ ತಿಳಿದಿರೇನು? ಮಗನಿಗೆ ಅಲ್ಲದೆ ಇನ್ಯಾರಿಗೆ ನೀವು ಖರ್ಚು ಮಾಡೋದು!" ಎಂದಳು ಶಂಕರಿ ಸಿಡುಕಿನ ಧ್ವನಿಯಿಂದ. ರಾಯರಿಗೂ ಸ್ವಲ್ಪ ದರ್ಪ ಇಳಿದಂತೆಯೇ ಆಯಿತು. ಕಿವಿಗೆ ಕೇಳಿಸದವರಂತೆ ಎಲೆಯಡಿಕೆ ಜಗಿಯುತ್ತಲೇ ಇದ್ದರು. ಅವರಿಗೂ ಒಂದು ವಿಧವಾದ ಮನೋನೆಮ್ಮದಿ ದೊರೆಯಿತು. ಇಷ್ಟು ದಿನದ ಶ್ರಮಕ್ಕೆ ತಕ್ಕಫಲ ದೊರೆಯಿತು ಎಂದು ಒಮ್ಮೆ ನಿಟ್ಟುಸಿರು ಬಿಟ್ಟರು ನಿರಾಳವಾಗಿ. ತಮ್ಮ ದಾಯಾದಿಗಳ ತಲೆಯ ಮೇಲೆ ಹೊಡೆದಂತೆ ಮಗನ ವಿದ್ಯಾಭ್ಯಾಸಕ್ಕೆ ಸರ್ವಪ್ರಯತ್ನದಿಂದಲೂ ಸಾಹಸಮಾಡಿ,ವಂಶಕ್ಕೇ ಕೀರ್ತಿ ತಂದೆನೆಂದು ಅವರು ಸುಖಸ್ವಪ್ನವನ್ನು ಕಂಡರು.

ಮನವನ್ನು ಮುರಿಯುತ್ತಾ ಶಂಕರಮ್ಮ ಎಂದಳು. "ರಾಜಾನನ್ನು ಏನು ಮಾಡುವುದು? ಈ ಸಾರಿ ಮೆಟ್ರಿಕ್ ಪಾಸಾದಾನು ಅಲ್ಲವೇ ?"

"ಅದನ್ನು ಕೇಳುತ್ತೀಯಲ್ಲ ಶಂಕರಿ. ರಾಮ ಬೊಂಬಾಯಿನಲ್ಲಿದ್ದರೆ ರಾಜೂ ಯೋಚನೆ ಏಕೆ ನಮಗೆ? ಅಣ್ಣ ತಮ್ಮ ಸುಖವಾಗಿರುತ್ತಾರೆ"

"ಎಂಥಾ ಮಾತನಾಡುತ್ತೀರಿ ನೋಡಿದಿರಾ ? ಅಲ್ಲಾ, ರಾಜೂ ಯೋಚನೆ ನಮಗೋ ರಾಮನಿಗೋ ?''

"ಹಾಗಲ್ಲವೇ, ಅಣ್ಣನೊಡನೆ ತಮ್ಮ ಇರಲಾಗದೇ ಅಂತ !''

"ಸರಿಸರಿ. ನೀವೋ ನಿಮ್ಮ ಯೋಚನೆಗಳೋ. ರಾಮನೂ ಇಷ್ಟುದಿನ ಪಾಪ ಹೋಟಲೋ ಹಾಸ್ಟಲೋ ಎಲ್ಲೋ ತಿಂದು ಕಷ್ಟಬಿದ್ದು ಓದಿ ಪಾಸು ಮಾಡಿದ. ಈಗಲಾದರೂ ಸುಖಬೇಡವೇ ಆ ಬೆಳೆಯುವ ದೇಹಕ್ಕೆ. ಅವನ ಸುಖ ನಿಮಗೇಕೆ ? ಸಂಸಾರ ಭಾರ ತಗಲು ಹಾಕಿಬಿಡಿ"

ರಾಯರು ಅವಕ್ಕಾಗಿ,"ಆಯಿತು, ಮಹರಾಯಿತಿ. ನೀನು ಹೇಗೆ ಹೇಳುತ್ತೀಯೋ ಹಾಗೇಯೇ ಆಗಲಿ'' ಎಂದರು. ಅಲ್ಲಿಗೆ ಸಂಭಾಷಣೆಯೂ ನಿಂತಂತಾಯಿತು. ಶಂಕರಮ್ಮ ಒಳಕ್ಕೆ ನಡೆದಳು. "ನಿನ್ನ ಮಾತಿನ ಪ್ರಪಂಚದಲ್ಲಿ ನನ್ನ ಆಫೀಸಿಗೆ ಹೊತ್ತಾಗಿ ಹೋಯಿತು'' ಎಂದು ಎದ್ದು ಕೋಟು ತರುವುದಕ್ಕೆ ಕೋಣೆಗೆ ಹೋದರು.

ನಾರಾಯಣ ರಾಯರಿಗೆ ದಾರಿಯುದ್ದಕ್ಕೂ ಹಳೆಯ ನೆನಹುಗಳೆಲ್ಲವೂ

ಮೂಡಿ ಮಾಯವಾದವು. ನಿಧಾನವಾಗಿ ಹೆಜ್ಜೆಹಾಕುತ್ತಾ ಎಲೆಯಡಿಕೆ ಮೆಲ್ಲುತ್ತಾ ಹೊರಟಿದ್ದರು. ರಸ್ತೆಯ ಪರಿವೆಯೇ ಇರಲಿಲ್ಲ. ತಮ್ಮ ಚಿಕ್ಕಮ್ಮನ ಮೋಸದಿಂದ ತಮಗೆ ದಕ್ಕಿದ ತೋಟ, ಗದ್ದೆ ಮತ್ತು ಹಳ್ಳಿಯ ಮನೆಗಳೆರಡನ್ನೂ ಜಯರಾಮನ ಡಾಕ್ಟರ್ ಪರೀಕ್ಷೆಯ ಓದಿಗೆ ಹರಿ ಲಾಲನಿಗೆ ಅಡವು ಹಾಕಿ ತ್ಯಾಗ ಹಾಕಿದ್ದರು. ಜಯರಾಮ ಕೆಲಸಕ್ಕೆ ಹೊಂದಿಕೊಂಡು ತಮ್ಮ ಆಸ್ತಿಯನ್ನು ಉಳಿಸಿಕೊಳ್ಳುವನೆಂದೇ ಅವರ ಪ್ರಬಲವಾದ ನಂಬಿಕೆ. ವಂಶ ಪಾರಂಪರ್ಯಕ್ಕೇ ಸಾಲವೆಂಬ ಸೊಲ್ಲಿರದಿ ದ್ದರೂ, ತಮ್ಮ ಕಾಲಕ್ಕೇ ಅದು ಆದುದು ಮನಸ್ಸಿಗೆ ನೋವಿಡುತ್ತಿತ್ತು. ಮರುಕ್ಷಣವೇ ಅದರ ಫಲದ ಹೊಂಬೆಳಗೂ ಕಾಣಿಸುತ್ತಿತ್ತು. ಅಂತೂ ಈ ಅನಂತ ಯೋಚನೆಗಳ ಸವಿಕಹಿ ದಿನಗಳನ್ನು ಕಳೆದು ಇಂದಿಗೆ ಕೃತ ಕೃತ್ಯತೆಯ ದೊಡ್ಡ ನಿಟ್ಟುಸಿರೆಳೆದರು. ತಲೆಯೆತ್ತಿ ನೋಡಿದಾಗ ತಾಲೂಕು ಕಛೇರಿಯೇ ಕಂಡುದುದು. "ಆಯಿತು ನಿನ್ನದಿಷ್ಟು ಋಣವಿದೆಯಲ್ಲವೇ. ಇನ್ನು ನಾಲ್ಕು ವರ್ಷ ತಾನೇ" ಎಂದು ನುಡಿದು ಕಛೇರಿಯ ಒಳಕ್ಕೆ ನಡೆ ದರು.

ರಾಯರಿಗೆ ಕೆಲಸದ ಅರಿವೇ ಆಗಲೊಲ್ಲದು. ಏನು ಖಾತೆ ತೆಗೆ ದರೂ ಪಾನು ತೆಗೆದರೂ, ಫೈಲ್ ನೋಡಿದರೂ ಅರ್ಥವೇ ಆಗದು. ಅವರ ಮನವೆಲ್ಲಾ ಮುಂದಿನ ಸುಖದ ದಿನಗಳ ಕನಸನ್ನು ಕಾಣುತ್ತಿತ್ತು. ಅಷ್ಟ ರಲ್ಲಿ ಟಪ್ಪಾಲು ಕಂತೆಗಳು ಬಂದು ಬಿದ್ದವು. ಪತ್ರಗಳನ್ನು ತೆಗೆದು ನೋಡಿ ದಾಗ ಮನಸ್ಸಿಗೆ ಜಿಜ್ಞಾಸೆಯೇ ಆಯಿತು. ರಾಮನೇಕೆ ಕಾಗದ ಬರೆ ಯಲಿಲ್ಲ. ಮನೆಯ ಅಡ್ರೆಸ್ಸಿಗೂ ಇಲ್ಲ. ಇಲ್ಲಿಗೂ ಇಲ್ಲ. ತಳಮಳದಿಂದ ಮನಸಷ್ಟು ಕುದಿಯಿತು. ಅನ್ಯಮನಸ್ಕರಾಗಿಯೇ ಪತ್ರಗಳನ್ನೋದಿ ತಿಳಿ ದಷ್ಟನ್ನು ಬರೆದರು. ಹಾಗೂ ಹೀಗೂ ದಿನವನ್ನು ಕಳೆದು ಸಂಜೆಗೆ ಮನೆಗೆ ಬಂದರು.

ಬಾಗಿಲಲ್ಲೇ ಹಾಜರ್ ಶಂಕರಮ್ಮ ದಿನಪರಿಯಂತೆ. "ಏನು, ನಗ್ತಾ ಹೋದವರು ಮುಖ ಸಪ್ಪಗೆ ಹಾಕಿಕೊಂಡು ಬರ್‍ತಾ ಇದ್ದೀರಲ್ಲಾ? ಮದುವೆ ಖರ್ಚು ತಯಾರಾಯ್ತು ಎಂತಲೋ" ಎಂದಳು.

"ಇನ್ನೇನು, ನಿಮ್ಗೆ ಹುಡುಗ ಕಣ್ಣಿಗೆ ಕಾಣ್ಸೋ ಹಾಗೆ ಆದ ಕೂಡಲೇ

ಯಾರಾರ್ಮನೆ ಹೆಣ್ಣು ಇವೆ, ವರದಕ್ಷಿಣೆ ಎಷ್ಟು, ಒಡವೆ ಎಷ್ಟು, ಮೂಹೂರ್ತ ಗೋತ್ರ ಇವೇ ಹೊರತು ಇನ್ನೇನು ವಿಚಾರ?'' ಎಂದು ರಾಯರು ರೇಗಿ ನುಡಿದರು.

"ನಮಗೇನೆ ಎಲ್ಲಾ ಯೋಚನೆ. ಪಾಪ ನಿಮಗೇನೂ ಬೇಡವೇ ಬೇಡ ಸಾಕು ಸಡ್ರೀರಿ. ದಾರಿಯಲ್ಲೇನು ಮಾತು ? ಕಂಡವರು ನಕ್ಕಾರು"

ಪೇಟವನ್ನು ತೆಗೆಯುತ್ತಾ ತಲೆಯನ್ನು ಮತ್ತೊಮ್ಮೆ ಸವರಿ ರಾಯರು ಒಳಕ್ಕೆ ನಡೆದರು. "ನೋಡು ಶಂಕರಿ, ಪರೀಕ್ಷೆ ಮುಗಿದು ಮೂರು ದಿನ ವಾದರೂ ರಾಮನ ಕಾಗದವೇ ಇಲ್ಲ. ಸೇತೂರಾಯನ ಮಗ ನರಸಿಂಹ ಸಾಯಂಕಾಲ ಬರುತ್ತಾನಂತೆ. ನಮ್ಮವನಿಗೇನಾಯ್ತೋ ಬರೋಕೆ ?"

"ದುಡ್ಡು ಸ್ವಲ್ಪ ಹೆಚ್ಚು ಕಳುಹಿಸಿದ್ದೀರೋ ಇಲ್ಲವೋ! ಕೊನೇತಿಂಗಳು ಸ್ನೇಹಿತರಜೊತೆಯಲ್ಲಿ ಸ್ವಲ್ಪದಿನ ಇದ್ದು ಬಂದಾನು.ತಡ ಆದರೆ ಏನಾಯ್ತು?"

"ಅಲ್ಲವೇ, ಅನ್ಯಾಯವಾಗಿ ದುಡ್ಡು ಖರ್ಚು ಮಾಡುತ್ತಾನಲ್ಲ ''

"ಹೋ, ನೀವೇನು ಮಹಾ ಅವನಿಗೆ ದುಡ್ಡು ಕೊಟ್ಟಿರೋದು. ಎಲ್ಲಾ ನನ್ನದೇ ಒಡವೆಗಳು ತಾನೇ''

ರಾಯರು ಸುಮ್ಮನಾದರು. ಮತ್ತೆ ವಿಷಯ ಬದಲಾಯಿಸುತ್ತಾ, "ಹಾಗೆಯೇ ಆಗಲಿ ಶಂಕರಿ. ಬರುತ್ತೇನೆ ಅನ್ನೋದಕ್ಕಾದರೂ ಕಾಗದ ಬೇಡವೇ'' ಎಂದರು.

"ಹಾಗಾದರೆ ಇಷ್ಟು ಹೊತ್ತಿಗೆ ಹೊರಟಿದ್ದರೂ ಹೊರಟಿದ್ದಾನು''

"ಎಲ್ಲಾ ನಿನ್ನದೇ ಕಲ್ಪನೆ. ಎಲ್ಲಾ ಮಾತುಗಳನ್ನು ನೀನೇ ಆಡು''

" ಯಾಕಿಷ್ಟು ರಾದ್ಧಾಂತ, ರಂಪಾಟ '' ಎಂದು ಶಂಕರಿ ರೇಗುವ ವೇಳೆಗೆ ಸರಿಯಾಗಿ ರಾಜೂ ಬಂದನು. ಪ್ರಾರಂಭವಾಗಬೇಕಾಗಿದ್ದ ಕುರು ಕ್ಷೇತ್ರ ಅಲ್ಲಿಗೆ ನಿಲ್ಲಲೇ ಬೇಕಾಯಿತು. ಕಾದಾಡಿದವರಂತೆ ಇಬ್ಬರೂ ಕೆಕ್ಕರಿಸಿ ಮುಖ ಮುಖ ನೋಡಿದರು. ರಾಜನಿಗೆ ವಿಷಯ ತಿಳಿದಿದ್ದರೂ ತಿಳಿಯದವನಂತೆ, "ಅಪ್ಪಾ, ನರಸಿಂಹ ಬಂದಿದ್ದಾನೆ. ಅಣ್ಣ ಎಲ್ಲಿ ಎಂದು ಕೇಳಿದರೆ ನನಗೆ ಗೊತ್ತಿಲ್ಲ ಎಂದ. ಕಾಗದ ಏನಾದರೂ ಬಂದಿತ್ತೇನು ಇವತ್ತು?" ಎಂದು ಕೇಳಿದನು.

ರಾಯರು ಕುತೂಹಲದಿಂದ "ಓಹೋ ಬಂದೇ ಬಿಟ್ನೇನು ನರಸು

ತಪ್ಪೆರಿ. ನೀನ್ಯಾಕೆ ಅವನ್ನ ಮಾತಾಡ್ಸೋಕೆ ಹೋಗಿದ್ದೆ. ವಿಷ್ಯಾದ್ರೂ ಆ ಪಾಯಾದ್ತನ ಯಾಕ್ಬಿಟ್ಟಾರು. ಬೇವಿನಕಾಯಿ ಬೇವಿನಕಾಯಿಯೇ!"

" ಅಪ್ಪಾ, ನಿಮ್ಮ ರೋಷ- ದ್ವೇಷ ಕಟ್ಕೊಂಡು ನಾನೇನಪ್ಪಾ ಸಾಯ್ಲಿ" ಎಂದನು.

"ನಾಚ್ಕೆ ಇಲ್ಲ ನಿನ್ಮುಖಕ್ಕೆ. ಅವನು ಕೆನ್ನೆಗೆ ಹೊಡೆದ ಹಾಗೆ ದಿಟ್ಟ ವಾಗಿ ಉತ್ತರ ಕೊಟ್ಟರೂ ತೆಪ್ಗೆ ಬಂದೀಯ''

"ದಿಟ್ಟವಾಗಿ ಉತ್ತರ ಕೊಟ್ರೆ ಅವನ ಗಂಟಲೇ ಉರೀತು''

"ನಿಮ್ಮ ವಿದ್ಯೆ ಗಮ್ಮತ್ತು ನಿಮಗೆ ತಲೆ ಹರಟೆ ತಂದ್ಬಿಟ್ಟಿದೆ. ಹೇಳಿದ್ದ ಕೆಲ್ಲಾ ಉತ್ತರ ತಯಾರ್'' ಎಂದು ರಾಯರು ದೊಡ್ಡಸ್ತನದ ಮಾತ ನ್ನಾಡಿದರು. ಶಂಕರಮ್ಮ ಒಮ್ಮೆಲೇ ರೇಗಿ ನುಡಿದಳು: "ಇಷ್ಟೆಲ್ಲಾ ಮಾತಾ ಡುವವರು ಆ ಹುಡುಗನ ಗಂಭೀರತನಕ್ಕಾದರೂ ತಲೆತ್ಗೋಮು ಬಿಟ್ಟು, ಮೂಗು ಮುರಿದು ಕೆರಳೋದು ನೋಡಬಾರದೆ? ಅದಕ್ಕೇ ನಿಮ್ಮ ಚಿಕ್ಕಪ್ಪ ಸರಿಯಾಗಿ ಶೋಕರ ಹಾಕಿದಾನೆ ನಿಮಗೆ'' ಎಂದಳು. ರಾಯರ ಕೋಪ ಪರಮಾವಧಿಯ ಶಿಖರ ಮುಟ್ಟಿತು. "ಏಯ್, ತೆಪ್ಪಗೆ ಬಿದ್ದಿರೇ. ನಿನಗೇಕೆ ಇಷ್ಟೆಲ್ಲಾ ಮಾತು. ಮಾತಾಡಿ ನನಗೇಕೆ ಹೊಟ್ಟೆ ಉರಿಸುತ್ತೀಯಾ?''

"ನಿಮ್ಮ ನ್ಯಾಯಕ್ಕೋ,ಅನ್ಯಾಯಕ್ಕೋ ನರಸಿಂಹ—ರಾಜರ ಮೇಲೆ ಯಾಕೆ ಸಿಟ್ಟು ಮಾಡಬೇಕಿತ್ತು ಅಂದೆ ನಾನು"

"ಅದಕ್ಕೆ ಕಣೆ ಅನ್ನೋದು,ಹೆಂಗಸರ ಬುದ್ಧಿ ಮೊಳಕಾಲಕೆಳಗೆ ಅಂತ ಅಲ್ಲವೇ. ಬೇವಿನ ಮರದಲಿ ಮಾವಿನ ಹಣ್ಣು ಬಿಟ್ಟೀತೇನೆ. ಬೇವಿನಕಾಯಿ. ಯಾವಾಗಲೂ ಬೇವಿನಕಾಯಿಯೆ. ಅಪ್ಪನಂತೆ ಮಗ''

"ಮಾವಿನ ಹಣ್ಣು ಬಿಡದಿದ್ದರೂ ಬೇವು ಹಣ್ಣಾದರೂ ಬಿಡುತ್ತದೆ ಯಲ್ಲ!" ಮಾತಿನ ಗುಡುಗುಗಳ ಮಧ್ಯೆ ರಾಜ ನುಸುಳಿ ಮರೆಯಾದ.

"ಸರಿ...ಯಾಯ್ತು. ನಿನ್ನ ಹತ್ತಿರ ಮಾತಾಡಿ ಯಾವೋನು ಬದು ಕೋನು'' ಎಂದು ಬಾಲಸುಟ್ಟ ಬೆಕ್ಕಿನಂತೆ, ತಲೆ ಕೊಡವಿ, ಬೋಳು ತಲೆಯನ್ನೊಮ್ಮೆ ಪಟ್ಟನೆ ತಟ್ಟಿ ಅಸಮಾಧಾನದ ಉಸಿರು ಬಿಟ್ಟರು.

"ನಿಮ್ಮ ಬುದ್ಧಿನ ಬ್ರಹ್ಮನೇ ಅಳೆಯಬೇಕು. ಅಪ್ಪ ಮಾಡಿದ್ದಕ್ಕೆ ಮಗ ಸೈಗುಟ್ಟಿದರೆ ಬಹಳಾ ಒಳ್ಳೇದೇನೋ''ಎಂದು ಶಂಕರಮ್ಮ ಗೊಣಗುಟ್ಟುತ್ತಾ

ಕೋಣೆಯಿಂದ ಹೊರಟು ಹೋದಳು.

ರಾಜಾ ತಾಯಿಯ ಬಳಿ ಬಂದು ಕೇಳಿದ: "ಅಂದಹಾಗೆ, ರಾಮುನ ಕಾಗದ ಏನೂ ಬಂದಿಲ್ಲೇನಮ್ಮ ?"

"ಬಂದೇ ಇಲ್ಲ ನೋಡು. ಕೋತಿ ಮುಂಡೇದು. ಪರೀಕ್ಷೆ ಆಯ್ತು ಅಂತಾದರೂ ಕಾಗದ ಬೇಡವೇ. ಇವರ ಪರದಾಟಕ್ಕೂ ಅವನ ಬೇಜವಾಬ್ದಾರಿಗೂ ಸರಿ ಹೊಂದಿದೆ. ಸಾಕಪ್ಪಾ. ಇದರಿಂದ ನನಗೆ ತಲೆ ಚಿಟ್ಟಿಡಿದು ಹೋಗಿದೆ, ಈಗೆರಡು ದಿನದಿಂದ''

"ನೀನು ಯಾಕಮ್ಮ ಅಷ್ಟು ಪೇಚಾಡಬೇಕು? ಅಪ್ಪನ ಗುಣವೇ ಹಾಗೆ. ಏನೋ friends ಜೊತೇಲಿ ಅಲೆಯುತ್ತಿದ್ದಾನು. ಬರ್ತಾನೆ, ಎಲ್ಲಿ ಹೋಗ್ತಾನೆ.''ಶಂಕರಮ್ಮ ಮರುಮಾತಾಡದೆ ಮರೆಯಾದಳು. ಹಲ್ಲಿಯೊಮ್ಮೆ ಲೊಚಗುಟ್ಟಿತು. "ಎಲಾ ಇವನ, ಇದಕ್ಕೇನು ಬಂತು ಕೇಡು. ಬರುತ್ತಾನೆ ಅಂತ ನಾವು ಕಾಯ್ತಾ ಇದ್ದರೆ, ಇದೇನೋ ಅಪಶಕುನ ನುಡಿಯುತ್ತಲ್ಲಾ, ನಿನ್ನ ಮನೆ ಹಾಳಾಗ"ಎಂದು ಶಪಿಸಿ ತಲೆ ಬಾಚುವುದಕ್ಕೆ ಅವನು ಕನ್ನಡಿ ಮುಂದೆ ನಿಂತನು.ಅಷ್ಟರಲ್ಲಿಯೇ ಸೀತೆ ಸಣ್ಣ ತಟ್ಟೆಯಲ್ಲಿ ತಿಂಡಿ ತಂದಿಟ್ಟಳು. ರಾಜು ತಿರುಗಿ ನೋಡಿ "ಲೇ ಸೀತೆ, ಅಷ್ಟೊಂದು ಬೇಡಾ ಕಣೇ. ಎರಡೇ ಕೋಡ ಬಳೆ ಸಾಕು'' ಎಂದನು.

"ಏ, ಇರಲಿ ತಗೋಳೋ. ಏನು ತಿಂತಿಯೋ ಮಹರಾಯ ನೀನು ಮುದುಕರ ಹಾಗೆ ಚೂರು ಚಾರು." ಎಂದು ಇನ್ನೂ ಎರಡು ಕೋಡುಬಳೆ ಹಾಕಿದಳು.

"ಯಾಕೇ ಇಷ್ಟು ಬಲವಂತ, ಬೇಡಾ ಅಂದ್ರೆ''

"ಹೂ. ಕೊಡೋ ಬೇಡದಿದ್ರೆ. ನಿನಗೇಕೆ ಅಷ್ಟು ಬಲವದ್ಬಂಧ'' ಎಂದು ಸೀತೆ ತಟ್ಟನೆ ನುಡಿದು ತಟ್ಟೆಯನ್ನು ಸರ್‍ರನೆ ಎಳೆದುಕೊಂಡು ಭರದಿಂದ ಹೋದಳು.

"ಎಲಾ ಇವಳ, ಇದ್ದದ್ದನ್ನೂ ತಗೊಂಡು ಹೋಗ್ಬಿಟ್ಟಳಲ್ಲಾ. ಏನು ಹಟಮಾರಿಯಪ್ಪ ಈಕೆ.'' ಎಂದು ಗೊಣಗುತ್ತಾ ಆಕೆ ಹೋದ ಕಡೆಗೇ ಹಿಂಬಾಲಿಸಿದ.

ಸೀತೆ ನಾರಾಯಣರಾಯರ ಒಬ್ಬಳೇ ಮಗಳು. ಕೊನೆಯ ಮಗ

ಎಂದು ಎಲ್ಲರಿಗೂ ಆಕೆಯ ಮೇಲೆ ಮಮತೆ ಹೆಚ್ಚು. ಸೀತಾ ಲಕ್ಷ್ಮಿ ವಯಸ್ಸಿನಲ್ಲಿ ಚಿಕ್ಕವಳಿದ್ದರೂ ಸುಖದಲ್ಲಿ ಬೆಳೆದು ಬಂದದ್ದರಿಂದ ತನ್ನ ನಿಜ ವಯೋಮಾನಕ್ಕಿಂತ ದೊಡ್ಡವಳಾಗಿಯೇ ಕಾಣುತ್ತಿದ್ದಳು. ನೋಡಲು ಬಹಳ ಸೌಮ್ಯವಾದರೂ ಸಿಡುಕು ಹೆಚ್ಚು. ಶಂಕರಮ್ಮ ಎಷ್ಟೇ ಸಮಾಧಾನ ಹೇಳಿದರೂ ಆಕೆಯ ಹಟಮಾರಿತನ ಸ್ವಲ್ಪವೂ ಕಡಮೆಯಾಗಲಿಲ್ಲ. ಚೇಷ್ಟೆಯನ್ನೇ ಎತ್ತಿ ಬೀರುವಂತಹ ಚಂಚಲ ಪೂರ್ಣ ಕಣ್ಣುಗಳು. ನೀಳವಾದ ಮೂಗು. ಗೋದಿಯ ಬಣ್ಣದ ತನು ಕಾಂತಿ. ತುಂಬುಮೈ. ನೂತನ ಹರೆಯ ದೊಡನೆ ಬಹು ಸುಂದರಿಯಾಗಿ ಕಾಣುತ್ತಿದ್ದಳು ಸೀತೆ. ಆಕೆಯ ಅವಿರತ ವಾಚಾಲತ್ವ ಇಡೀ ವಠಾರಕ್ಕೇ ಪರಿಚಿತ. ಮಾತನಾಡದ ಮನೆಯಿಲ್ಲ. ಮರೆಯಾದ ವಸ್ತುವಿಲ್ಲ. ಆಕೆಯ ಬಾಯಲ್ಲಿ ಯಾರೂ ಮಾತಿಗೆ ಸಿಕ್ಕದಿದ್ದರೆ ಯಾವುದಾದರೊಂದು ಹಾಡನ್ನಾದರೂ ಗೊಣಗುತ್ತಿದ್ದಳು. "ರಾತ್ರಿ ಮಲಗಿದಾಗ ಮಾತ್ರವೇ ನಿನ್ನ ಬಾಯಿಗೆ ಬಿಡುವು" ಎಂದು ಶಂಕರಮ್ಮ ಹಗಲೆಲ್ಲಾ ನಿಂದಿಸುತ್ತಿದ್ದರು. ವ್ಯತ್ಯಾಸವೇನೂ ಕಂಡು ಬರಲಿಲ್ಲ ಆಕೆಯಲ್ಲಿ. ನಡೆದೇ ಇತ್ತು ಆಕೆಯ ದಿನಚರಿ.

ಸೀತೆ ದೊಡ್ಡವಳಾದಾಗಿನಿಂದಲೇ ರಾಯರಿಗೆ ವರನ ಯೋಚನೆ ಆರಂಭವಾಗಿತ್ತು. ಆದರೂ ವರಾನ್ವೇಷಣೆ ಅಷ್ಟು ತ್ವರಿತವಾಗಿ ಸಾಗಿರಲಿಲ್ಲ. ಶಂಕರಮ್ಮನವರೂ ಅದರ ವಿಚಾರ ಎತ್ತಿರಲಿಲ್ಲ. "ಏನಿದ್ದರೂ ಒಳಗಿಂದಲೇ ಬರಲಿ. ಆ ಮೇಲೆ ನನ್ನ ಕಾರ್ಯಾರಂಭ" ಎಂದು ರಾಯರ ನಿರ್ಧಾರ. ಆದರೂ ಈ ವರ್ಷವೇ ಅದು ಬಂದೀತೆಂದು ಅವರ ನಿರೀಕ್ಷೆ. ಯೋಚನೆಯೇನೋ ಪಟ್ಟಾಗಿಯೇ ಹಿಡಿದಿತ್ತು. ಶಂಕರಮ್ಮನಿಗೆ ಹುಡುಗಿಯನ್ನು ಇನ್ನೂ ಓದಿಸಬೇಕೆಂಬ ವಿಚಾರ. ಮೆಟ್ರಿಕ್ ಆದರೂ ಪಾಸಾದರೆ ಚೆನ್ನು ಎಂದುಕೊಂಡಿದ್ದರು. ಇವಿಷ್ಟು ಮನೋರಾಜ್ಯದಲ್ಲಿಯೇ ಇದ್ದವೇ ಹೊರತು ಒಬ್ಬರೂ ಬಾಯಿಬಿಟ್ಟು ಮಾತನಾಡಿರಲಿಲ್ಲ. ಮೆಟ್ರಿಕ್ ಪಾಸಾಗುವುದಕ್ಕೆ ಇನ್ನೂ ಎರಡು ವರ್ಷದ ನಂತರವೇ ಯೋಚನೆ ಎಂದು ಸುಮ್ಮನಿದ್ದರು ಶಂಕರಮ್ಮ. ಅದರಲ್ಲೂ ಹೆಣ್ಣು ಮಗಳನ್ನು ಬಿಟ್ಟಿರಬೇಕಾಗುವುದಲ್ಲಾ ಎಂಬ ತಾಯ್ಕರುಳಿನ ವೇದನೆಯೇ ಎಲ್ಲಕ್ಕೂ ಹೆಚ್ಚು ಕಾರಣ.

ರಾಜ ಕಾಫಿ ಕುಡಿದಿಟ್ಟಿದ್ದ ಲೋಟವನ್ನು ತೆಗೆದುಕೊಂಡು ಹೋಗಲ್ಲ

ಸೀತೆ ಮತ್ತೊಮ್ಮೆ ಅವನ ಕೋಣೆಗೆ ಬಂದಳು.

"ಲೋಟ ತಗೊಳ್ಳೇನೋ ರಾಜ ?"

"ಏಸ್ತಲೆ ಹರಟೇನೆ ನಿನ್ನದು ! ತಗೊಳ್ಳೇ. ನಿನ್ನದು ಎಂದಿದ್ದರೂ ಅಷ್ಟೇ ತಾನೇ, ಲೋಟ ತೊಳೆಯೋದು"

"ಅದ್ಯಾಕೋ ಹಾಗೆ ಪಟಾಕಿ ಪಟಗುಟ್ಟಿದ ಹಾಗೆ ಪಟ್ ಪಟ್ ಅಂತ ರೇಗ್ತೀಯಾ? ನಾವು ಲೋಟ ತೊಳದ್ರೇ ತಾನೆ ನಿಮ್ಮ ಬಾಳು ಬಚವಾಗೋದು? ನಾವು ಲೋಟ ತೊಳೆದರೆ ನೀನು ಗುಮಾಸ್ತೆ ಮಾಡುತ್ತೀಯಲ್ಲ ಯಾವನೋ ಕೈಕೆಳಗೆ–ಭೂಪತಿರಂಗ"

"ಲೇ, ನಿನ್ನ ಮದುವೆಯಾಮೋನ ಗತಿ ಬೇಡಾ ಅನ್ನಿಸಿಬಿಡುತ್ತಿ ಕಣೇ. ಸಾಕ್ ಮಾತು. ತಗೊಂಡು ಹೊರಟ್ಹೋಗು ಇಲ್ಲಿಂದ"

"ನೀನೇ ಅಲ್ಲವೇನೋ ಸಂ :ನ್ನ. ಪಾಪ, ಮಾತೇ ಬರೋಲ್ಲ ಅಲ್ಲವೇ ನಿನಗೆ. ಮಾತುಮಾತಿಗೂ ಸಿಡುಕು. ಸಂಭಾವಿತ ಅನ್ನೋದು ಅಮ್ಮನ ಬೆಪ್ಪುತನ." ಎಂದು ಸೀತೆ ಗೊಣಗುವುದರಲ್ಲಿ ಶಂಕರಮ್ಮ ಹಾಜರಾಗಿ ಏನು "ಯಾರೇ ಅದು ಸಿಡುಕ, ಬೆಪ್ಪುತನ." ಎಂದಳು.

"ಅದೇ ನಿಂತಿದಾನ್ನೋಡು ಧಾಂಡಿಗನ್ಹಾಗೆ ! ನಿನ್ನ ಸಂಪನ್ನ ಪುತ್ರ ! ಮೂರ್ಹೊತ್ತೂ ಹೊಗಳೋತೀಯಲ್ಲ !"

"ಏ, ಯಾಕೇ ತಲೆ ತಿರುಗಿತ್ತೇನು ನಿಂಗೆ. ಕಾಲು ಕೆರೆದು ಜಗಳ ತೆಗೆದು ನನ್ನೇ ಧಾಂಡಿಗ ಅಂತಾ ಬಯ್ತೀಯಾ, ಕತ್ತೆ"

"ಲೇ ಸೀತೆ, ಯಾಕೆ ನೀನು ಅವನ್ನ ಕಾಡ್ಸಿ ಪೀಡಿಸುತ್ತೀಯ? ನಿನ್ನ ಹುಡುಗಾಟ ಸಾಕ್ಹೋಗು. ನೀನೂ ಅಂಥವನೇ ಕಾಣೋ. ಅದ್ರ ಜೊತೇಲಿ ಏನು ಮಾತು. ಬರೀ ಹುಚ್ಚು ಹುಡುಗಿ" ಎಂದು ಶಂಕರಮ್ಮ ರಾಜಿ ಮಾಡಬೇಕಾಯಿತು. ಸೀತೆ ಮತ್ತೊಮ್ಮೆ ಮೂಗುತಿರುವಿ ಮುಖ ಉರಿಸುತ್ತಾ ಕೋಣೆಯಿಂದ ಹೋದಳು. ಆಕೆಗೆ ರಾಜನನ್ನು ಕಾಡುವುದೆಂದರೆ ಬಹಳ ಸಂತೋಷ. ವಾಸ್ತವವಾಗಿ ಆತ ಬಹುಮಿತಭಾಷಿ. ಆತನ ಸಂಪನ್ನತೆಯಂತೂ ಸರ್ವ ವಿದಿತ. ಕೋಪವೆಂಬುದು ಅಪೂರ್ವ ವಸ್ತು. ಎಂದೋ ಯಾವಾಗಲೋ ಯಾರಾದರೂ ಬಿರುನುಡಿದರೆ, ತನಗೆ ಕೋಪವೇನಾದರೂ ಉಕ್ಕಿ ಬಂದರೆ, ಮತ್ತೆ ಅನರ್ಥವಾದೀತೆಂದು ತಾನೇ ಅಲ್ಲಿಂದ ಮರೆಯಾಗು

ತ್ತಿದ್ದ. ಶಾಂತನಾಗುವ ವರೆಗೂ ಬರುತ್ತಿರಲಿಲ್ಲ. ಯಾರಿಗೂ ಬಿರುಸು ನುಡಿ ಆಡಿದುದಿಲ್ಲ. ಇದಕ್ಕೆಲ್ಲಾ ಹೆಚ್ಚಿನ ಕಾರಣ ಮಹಾತ್ಮಾಜಿಯವರ ಉಪದೇಶ. ಅವರ ತತ್ವವನ್ನು ಬಹು ಚೆನ್ನಾಗಿ ಬಗ್ಗಿಸಿಕೊಂಡಿದ್ದನಾತ. ರಾಜಕೀಯದಲ್ಲಿ ಇಲ್ಲದ ಆಸಕ್ತಿ ಅವನಿಗೆ. ಪ್ರತಿದಿನ ಪ್ರಾತಃಕಾಲ ಮಿತವ್ಯಾಯಾಮ ದಿಂದ ದೇಹ ದಾರ್ಢ್ಯವನ್ನೂ ಸಂಪಾದಿಸಿದ್ದ. ಮನೆಯ ಹೆಚ್ಚು ಭಾಗದ ಕೆಲಸ ಆತನ ಮೈಮೇಲೆಯೇ. ಇಷ್ಟಾದರೂ ರಾಯರಿಗೆ ಅವನ ಮೇಲೆ ಅಸ ಮಾಧಾನ ಹೆಚ್ಚು. ಆತ ಎಂದೂ ತಂದೆ ಇದಿರಿಗೆ ಮುಖ ಎತ್ತಿ ಮಾತನಾಡಿ ಮುದಿಲ್ಲ. ಏನಿದ್ದರೂ ಆವನ ಮಾತುಗಳು ತಾಯಿಯ ಬಳಿಯೇ. ರಾಯರಿಗೆ ಇದು ಸೇರದು. ಶಂಕರಮ್ಮನಂತೂ ಆತನ ಸೌಜನ್ಯಕ್ಕೆ ಒಪ್ಪಿಕೊಂಡು ಮನ ದಲ್ಲೇ ಹಿಗ್ಗಿದ್ದಳು. ರಾಯರೂ ಅವನಿಗೆ ಒಗ್ಗಿದರು. ಜಯರಾಮ ಇವೆಲ್ಲಕ್ಕೂ ತದ್ವಿರುದ್ಧ. ಸ್ವಭಾವತಃ ಸಿಡುಕ, ಮುಂಗೋಪಿ. ಸೀತೆಯಂತೂ ಅವನು ಊರಿಗೆ ಬಂದು ಮೂರುದಿನವಾದಮೇಲೆಯೇ ಅವನ ಮುಖ ನೋಡುವ ಧೈರ್ಯಮಾಡುತ್ತಿದ್ದಳು. ಅವನಾಗಿಯೇ ಮಾತನಾಡಿಸುವ ವರೆಗೂ ಮಾತನಾಡುತ್ತಿರಲಿಲ್ಲ. ಏನು ಮಾತಾಡಿದರೆ ಏನು ಪ್ರಮಾದವೋ, ಪರಿಣಾ ಮವೋ ! ಮಿಡ್ಲ್ ಸ್ಕೂಲ್ ವಿದ್ಯಾಭ್ಯಾಸ ಮುಗಿದನಂತರ ಹೈಸ್ಕೂಲ್‌ಗೆ ನಗರ ಸೇರಿದ ರಾಯರು ತಮ್ಮ ದಾಯಾದಿಗಳ ಮೇಲಿನ ರೊಚ್ಚಿನಿಂದ, ಜ್ಯೇಷ್ಠಪುತ್ರನಿಗೆ ಉಚ್ಚ ವಿದ್ಯಾಭ್ಯಾಸ ಮಾಡಿಸಲೇಬೇಕೆಂಬ ಹುಚ್ಚಿನಿಂದ ಕಾಲೇಜಿಗೂ ಅಪ್ಪಣೆ ಕೊಟ್ಟರು. ಜಯರಾಮನಿಗೆ ಆಶ್ಚರ್ಯ ! ಕಾಲೇಜಿ ಗಾಗಿ ಊರು ಬಿಟ್ಟು ವೈದ್ಯಕೀ ಪರೀಕ್ಷೆ ಮುಗಿಯುವ ಇಲ್ಲಿನ ತನಕವೂ ಅವನ ವಾಸ ಪಟ್ಟಣದಲ್ಲೇ ನಡೆಯಿತು. ನಗರದ ಹೊಸ ವಾತಾವರಣಕ್ಕೆ ಸರಿಯಾಗಿ ಹೊಂದಿತು ಅವನ ಗುಣ. ರಾಯರೂ ಅವನಿಗೆ ಸರಿಯಾಗಿ ಸಕಾ ಲಕ್ಕೆ ಕೇಳಿದಷ್ಟು ಹಣ ಕಳುಹಿಸುತ್ತಿದ್ದರು. ಊರಿಗೆ ಬರುವುದೇ ಪ್ರಯಾಸ ವಾಯಿತು ಅವನಿಗೆ. ಪರೀಕ್ಷೆಯೋ, ಓದೋ, ಯಾವುದೋ ನೆವದಿಂದ ಊರಿಗೆ ಬಂದರೂ, ಹದಿನೈದು ದಿನ ಇರುವಷ್ಟರಲ್ಲೇ ಸಾಕು ಸಾಕಾಗು ತ್ತಿತ್ತು. "ಏನೋ ಇದು ರಾಮ, ವರ್ಷಗಟ್ಟಲೇ ಎಣ್ಣೆ ನೀರು, ಊಟ ಉಪ ಚಾರ ಇಲ್ಲದೆ ನಿನ್ನ ರೂಪವೇ ಕೆಟ್ಟಿವೆಯಿಲ್ಲಪ್ಪಾ. ಇನ್ನೊಂದು ಹದಿನೈದು ದಿನ ಇರಬಾರದೇ"? ಎಂದು ಶಂಕರಮ್ಮ ತಾಯಿಯ ಮಮತೆಯಿಂದ ನುಡಿ

ಯುವಳು. "ಓದುವ ವರೆಗೆ ಅವೆಲ್ಲಾ ನೋಡೋದಕ್ಕಾಗುತ್ತೇನಮ್ಮ" ಎಂದು ಜಯರಾಮ ಹೇಳಿ ಬಿಡುವ. ರಾಯರೂ ಅವನ ಪಕ್ಷವನ್ನೇ ಸಮರ್ಥಿಸುವರು. ರಾಜನೊಡನೆಯೂ ಹೆಚ್ಚು ಮಾತನಾಡುತ್ತಿರಲಿಲ್ಲ. ಕಾರಣ, ಆತನ ರಾಜಕೀಯದ ಹುಚ್ಚು. "ಲೇ ರಾಜ ನಿನ್ನ ಆದರ್ಶದ ರಾಜ್ಯ, ಈ ಕಲಿಯುಗಕ್ಕೆ ಬರೋಲ್ಲ ಕಾಣೋ." ಎಂದು ಹರಸುವ. "ಕಲಿಯುಗಕ್ಕಲ್ಲದಿದ್ದರೂ, ಮುಂದಿನ ಯುಗಕ್ಕಾದರೂ ಬರಲಿ ಬಿಡು" ಎನ್ನುವ ರಾಜ. "ಬಿಡು ಆ ಗಾಂಧಿಯವರಿಗೇನು ಹಿಂದೆ ಮುಂದೆ ಯೋಚನೆ ಇದ್ದರೆ ತಾನೆ?" ಎಂದು ರಾಯರೂ ದನಿಗೂಡಿಸುವರು."ಹ್ಯಾಗಾದ್ರೂ ಆಗ್ಲಿ,ಹುಷಾರಾಗಿರಪ್ಪ ರಾಜ" ಎಂದು ರಾಮನ ಬುದ್ಧಿವಾದ ಊರಿಗೆ ಹೊರಡುವ ಮುನ್ನ. ಆಗಿಂದಾಗ್ಗೆ ಕಾಗದಗಳೂ ಬರುತ್ತಿದ್ದುವು ರಾಮನಿಂದ.ಪ್ರತಿಯೊಂದರಲ್ಲೂ ಅದೇ ಮಾತು. ರಾಜ ಒಮ್ಮೊಮ್ಮೆ ರೇಗಿ ಉತ್ತರವನ್ನೇ ಬರೆಯುತ್ತಿರಲಿಲ್ಲ. ಇಬ್ಬರೂ ರಾಜಕೀಯ ವೈರಿಗಳೇ ಇದ್ದರು.

ರಾಜು ಮಿಡ್ಲ್ ಸ್ಕೂಲ್ ಮುಗಿಸುವಷ್ಟರಲ್ಲೇ ಹೈಸ್ಕೂಲೂ ತಮ್ಮ ಊರಿಗೇ ಬಂದುದರಿಂದ ನಿರ್ಯೋಚನೆಯಾಗಿ ಅಭ್ಯಾಸವೂ ಮುಂದುವರಿಯಿತು. ಮುಂದೆ ಕಾಲೇಜಿಗೆ ರಾಮನೊಡನೇ ನಡೆಯಲಿ ಎಂಬುದು ರಾಯರ ವಾದ. ಸಾಧ್ಯವಿಲ್ಲ ಎಂದು ಶಂಕರಮ್ಮನ ವಾದ. ರಾಜನೂ ತಾಯಿಯ ಕಡೆಗೇ ನೆರವಾದ. ಇನ್ನೂ ಯಾವುದನ್ನೂ ಆತ ನಿರ್ಧರ ಮಾಡಿರಲಿಲ್ಲ. "ರಿಸಲ್ಟ್ ಬರಲಿ ಬಿಡಪ್ಪಾ. ಆ ಮೇಲೆ ತಾನೆ ಯೋಚನೆ" ಎಂದು ಮಾತನ್ನೇ ಹಾರಿಸಿ ಬಿಡುವ. ಮೊದಲಿಂದಲೂ ಮನೆಯ ಸರಳ ವಾತಾವರಣದಲ್ಲೇ ಬೆಳೆದದ್ದರಿಂದ, ಮನೆಯ ವಾತಾವರಣ ಬಗ್ಗಿತ್ತು. ಸಂಸಾರದ ಸುಖಕಷ್ಟಗಳನ್ನರಿತಿದ್ದ. ಅಣ್ಣನ ಓದಿಗೆ ತಂದೆಯ ಋಣವನ್ನು ನೋಡಿ ಅಸಹ್ಯಪಡುತ್ತಿದ್ದ. ತಾನು ಹಾಗೆ ಆಗಬಾರದೆಂಬುದು ಆತನ ದೃಢಾಶಯ. ತಂದೆಯ ಇಳಿವಯಸ್ಸಿನಲ್ಲಿ ತನ್ನಿಂದ ಇನ್ನಷ್ಟು ತೊಂದರೆಯಾದೀತೆಂಬ ಮುಂದಾಲೋಚನೆ ಅವನಿಗೆ. ಅದಕ್ಕೋಸ್ಕರವೇ ಆತ ಕಾಲೇಜು ವಿದ್ಯಾಭ್ಯಾಸಕ್ಕೆ ಹೆಚ್ಚು ಉತ್ಸಾಹ ತೋರಲಿಲ್ಲ. ರಾಮನ ಓದಿಗೆ ಆದ ಅಗಾಧ ಸಾಲದ ಹಣ ಮುಗಿಸಬೇಕಷ್ಟೆ. ಸಾಲದ್ದಕ್ಕೆ ಸೀತೆಯ ಮದುವೆಯ ವಿಷಯವೂ ಒಂದಾಗಿತ್ತು. ಈ ವರ್ಷವಲ್ಲದಿದ್ದರೂ ಮುಂದಿನ ವರ್ಷಕ್ಕಾದರೂ ಆಕೆಗೆ ಮದುವೆಯಾಗಲೇ

ಬೇಕು ತಾನೆ ! ಅದಕ್ಕೇನೂ ಖರ್ಚು ಮುಟ್ಟದಿರುವುದಿಲ್ಲ. ಅದೂ ಇಂದಿನ ವರದಕ್ಷಿಣೆಯ ಮೊತ್ತದ ಮೇಲೆ ಚಿಂತಿತ್ತೇ ಹೊರತು, ವರಗಳಿದ್ದಿರಲಿಲ್ಲ ವೆಂದಲ್ಲ. ಇದೂ ಅಲ್ಲದೆ ತಮ್ಮ ಒಬ್ಬಳೇ ಮಗಳನ್ನು ಸ್ವಲ್ಪವಾದರೂ ಕಲಿತ ಒಳ್ಳೆಯ ವರನಿಗೆ ಕೊಡಬೇಕೆಂಬ ಉತ್ಕಟೇಚ್ಛೆ ಬೇರೆ. ಈ ಖರ್ಚುಗಳ ಜೊತೆಯಲ್ಲಿ ನನ್ನ ಖರ್ಚು ಬೇಡ ಎಂದು ನಿರ್ಧರಿಸಿದ್ದ. ಆದರೆ ಯಾರಿಗೂ ಬಾಯಿ ಬಿಡಲಿಲ್ಲ. ಕೊನೆಯ ಪಕ್ಷ ಸೀತೆಯ ಮದುವೆಯಾಗುವವರೆಗೂ ಕಾಲೇಜು ಸೇರುವುದಿಲ್ಲವೆಂದು ನಿಶ್ಚಯ ಮಾಡಿಕೊಂಡೇ ನಿಂತಿದ್ದ. ಮುಂದೆ ಅದೃಷ್ಟ ಖುಲಾಯಿಸಿದರೆ, ಕಾರ್ಯ ಸಾಧಿಸುವಾ ಎಂದು ಯೋಚಿಸಿ, ನಿರಾತಂಕವಾಗಿದ್ದ.

ಜಯರಾಮ ಮಾತ್ರ ಈ ಯಾವೊಂದೂ ಮನೆಯ ವಿಷಯದ ಜ್ಞಾನವೇ ಇಲ್ಲದೆ ನಿಶ್ಚಿಂತನಾಗಿ ಮುಂಬಯಿಯ ವಾತಾವರಣಕ್ಕೆ ಸೇರಿ ಹೋಗಿದ್ದ. ವೈದ್ಯಕೀ ಪರೀಕ್ಷೆಯ ವಿದ್ಯಾರ್ಥಿಗಳ ಖರ್ಚನ್ನು ತಡೆಯಲು ಯಾವನಿಗೆ ಸಾಧ್ಯ? ಅವರ ಖರ್ಚನ್ನು ನೋಡಿದರೆ ಹಣದ ಗಿಡವೇನಾದರೂ ಇದೆಯೇ ಎಂಬ ಸಂಶಯ ಬಂದೀತು. ಅಂತೆಯೇ ರಾಮ ನಿರ್ಯೋಚನೆಯಾಗಿ ಹಣದ ವೆಚ್ಚಕ್ಕೆ ಹಿಂದೆ ಮುಂದೆ ನೋಡದೆ, ಬಂದಷ್ಟನ್ನೂ ಉಡಾಯಿಸುತ್ತಿದ್ದ. "ಈ ಸಾಲ ಎಷ್ಟರದು. ಒಂದೇ ವರ್ಷದಲ್ಲಿ ತೀರಿಸಿಯೇನು'' ಎಂಬ ಹೆಚ್ಚಿನ ಎದೆಗಾರಿಕೆ. ಊರಿನಲ್ಲಿರುವ ತನಕ ನೆಟ್ಟಗೆ ಮೋಟು ಚೊಣ್ಣ ಹಾಕಲು ಬರದಿದ್ದರೂ, ಮುಂಬಯಿಗೆ ಬಂದಮೇಲೆ ಅವನ ಪೋಷಾಕು ನಿಂತು ನೋಡಬೇಕೆನ್ನುವಷ್ಟು ಸುಧಾರಿಸಿತ್ತು. ಒಮ್ಮೆಲೇ ಅವನನ್ನು ಗೊತ್ತು ಹಿಡಿಯಲು ಅಸಾಧ್ಯವೇ ಸರಿ. ರಾಮಕೃಷ್ಣ ಉಪಾಧ್ಯರ ಕೈಯಲ್ಲಿ ರಾಯರು ಒಮ್ಮೆ ರಾಮನಿಗೆ ದುಡ್ಡು ಕಳುಹಿಸಿದ್ದರಂತೆ. ಉಪಾಧ್ಯರು ಕಾಲೇಜು ಮುಂದೆ ನಿಂತು ಕಾದರೂ ಅವನ ಸುಳಿವೇ ಹತ್ತಲಿಲ್ಲವಂತೆ. ಎರಡು ದಿನದ ನಂತರ, ಹೇಗೋ ಪತ್ತೆ ಹಚ್ಚಿ ದುಡ್ಡು ಕೊಟ್ಟರಂತೆ. "ಹುಡುಗ ಬಹಳ ಖಯಾಲ್ಲಿ ಇರಲಿಕ್ಕೆ. ಸಾಕಲ್ಲ" ಎಂದು ಊರಲ್ಲಿ ಬಂದು ಹೇಳಿದರು. ಅವನ ರೂಮಿನ ತುಂಬಾ ಬರೀ ಇಂಥವೇ ಸಾಮಾನುಗಳು ತುಂಬಿದ್ದವು. ಬಚ್ಚಲು ಮನೆಗೆ ಬೇರೆ ಚಪ್ಪಲು, ವಾಕಿಂಗಿಗೆ ಬೇರೆ, ಊಟಕ್ಕೆ ಬೇರೆ, ಕಾಲೇಜು ಬೂಟ್ಸೇ ಬೇರೆ, ಹೀಗೇ ಮೋಜು ನಡೆಸಿದ್ದ. ಉಪಾಧ್ಯ

ರಂತೂ ಅವಕ್ಕಾಗಿ "ಎಷ್ಟು ಜನ ಇದ್ದೀರಾ ರೂಮಿನಲ್ಲಿ'' ಎಂದೇ ಬಿಟ್ಟರು. ರಾಮನಿಗೂ ನಗು ಉಕ್ಕಿ ಬಂದರೂ ತಡೆದು "ನಾನೊಬ್ಬನೇ" ಎಂದ. ಉಪಾಧ್ಯರು ಬಾಯಿ ಮೇಲೆ ಕೈಹಚ್ಚಿದರು. ಆಧುನಿಕ ಯುವಕರಿಗೆ ಯುವತಿಯರಿಗಿಂತಲೂ ಹೆಚ್ಚಾಗಿ ಸೌಂದರ್ಯ ಸಾಧನಗಳು ಬೇಕೆಂದರೆ ಅತಿಶಯೋಕ್ತಿಯಾಗಲಾರದು. ಯುವತಿಯರ ಕೆನ್ನೆಗಳಷ್ಟೇ ನಯಿಸ್ಸಾಗಿರಲಿ ತಮ್ಮ ಕೆನ್ನೆಗಳು ಎಂದು ಸ್ನೋ, ಪೌಡರ್‌ಗಳನ್ನು ಮೆತ್ತಿದ್ದೇ ಮೆತ್ತಿದ್ದು. ಸಿಗರೇಟ್ ಎಳೆದು ಕಪ್ಪಾದ ತುಟಿಗಳಿಗೆ ರಂಗು ಬರಲಿ ಎಂದು ಬಣ್ಣ ಹಾಕುವುದು, ತಲೆಗೆ ಘಮಘಮಿಸುವ ಪೊಮೇಡ್ ಬ್ರಿಲಿಯಂಟೈನ್, ಗಂಟೆಗೆ ಅರುವತ್ತು ಸಲ ತಲೆ ಹಿಕ್ಕುವುದು ಇವೆಲ್ಲವೂ ವಿದ್ಯಾರ್ಥಿಯ ಲಕ್ಷಣಗಳು. ರಾಮನೇನು ಬೇರೆಯಲ್ಲವಲ್ಲ! ಉಪಾಧ್ಯರಿಗೆ ಮಾತ್ರ ಇನ್ನೂ ಏನೇನೋ ಅನುಮಾನಗಳು ಬಂತು. ಬಾಯಿಬಿಟ್ಟರೆ ಬಣ್ಣಗೇಡು ಎಂದು ಬಾಯಿ ಭದ್ರ ಮಾಡಿಕೊಂಡು, ತಮ್ಮ ವ್ಯಾಪಾರ ಮುಗಿಸಿಕೊಂಡು ಊರಿಗೆ ಬಂದು, ವರದಿಯನ್ನು ಒಪ್ಪಿಸುವಂತೆ ಒಪ್ಪಿಸಿ ಬಿಟ್ಟರು. ರಾಯರೇನಾದರೂ ಮುಂಬಯಿಗೆ ಬಂದಿದ್ದರೆ ನೋಡಿ ಎದೆಯೊಡೆಯುತ್ತಿದ್ದರು. ತಾವು ತೊಂದರೆಪಟ್ಟು ಕಳುಹಿಸುವ ಹಣ ಹೇಗೆ ವಿನಿಯೋಗವಾಗುತ್ತಿದೆ ಎಂಬುದಕ್ಕೆ ತಕ್ಕ ನಿದರ್ಶನ ಸಿಗುತ್ತಿತ್ತು. ರಾಮನ ಅದೃಷ್ಟಕ್ಕೆ ಸರಿಯಾಗಿ ಅವರು ಅವನ ವಿದ್ಯಾಭ್ಯಾಸ ಮುಗಿಯುವ ಈತನಕವೂ ಬರಲಿಲ್ಲ. "ಪಿಂಚಣಿ ಬಂದ ಮೇಲೆ ಅಲ್ಲೇ ತಾನೇ ನಮ್ಮ ವಾಸ"ಎಂದು ಸಮಾಧಾನಮಾಡಿಕೊಂಡಿದ್ದರು. ರಾಮನ ಈ ಪರಿವರ್ತನೆಗೆಕಾರಣ ವಿಜಯೇಂದ್ರನೇ ಎಂದು ರಾಮನ ದಾಯಾದಿ ನರಸಿಂಹನಟೀಕೆ.

ವಿಜಯ, ರಾಮನ ಸಹಪಾಠಿ. ಅಲ್ಲದೆ ಅವರ ಮನೆಯೂ ರಾಮನ ಹಾಸ್ಟಲ್ ಪಕ್ಕಕ್ಕೇ ಇತ್ತು. ರಾವ್‌ಬಹದ್ದೂರರ ಮಗನೆಂದ ಮೇಲೆ ಡೌಲು ಇದ್ದನೆಂದು ಬೇರೆ ಹೇಳಬೇಕಾಗಿಲ್ಲ. ರಾವ್‌ಬಹದ್ದೂರ್ ರಾಜಾರಾಯರದು ಎರಡಂತಸ್ತಿನ ವಿಶಾಲವಾದ ಬಂಗಲೆ. ಇನ್ನೂ ಅಂಥದೇ ಎರಡು ಕಟ್ಟಡವಾಗುವಷ್ಟು ವಿಸ್ತಾರವಾದ ಜಾಗೆಯಲ್ಲಿ ತೋಟ. ನಡುವೆ ಕಾರಂಜಿ. ಮಗ್ಗುಲಲ್ಲೊಂದು ದೊಡ್ಡ ಕೊಳ. ಮನೆತುಂಬಾ ಗಜಿಬಿಜಿಯೆನ್ನುವಷ್ಟು ಕೈಯಾಳುಗಳು. ಆಗಾಗ್ಗೆ ಭರ್ರೆಂದು ಸದ್ದುಮಾಡುವ ಕಾರುಗಳು. ನಾಲ್ಕಾರು ಬೈಸಿಕಲ್ಲುಗಳು. ರಾವ್‌ಬಹದ್ದೂರರದು ಬಹಳ ದೊಡ್ಡ ಕಾಫೀ ಎಸ್ಟೇಟ್ ನೀಲ

ಗಿರಿ ಕಡೆ ಇದೆ. ರಾಜಾರಾಯರು ಐ.ಸಿ.ಎಸ್‌ಗೆಂದು ಇಂಗ್ಲೆಂಡಿಗೆ ನೀಲಗಿರಿ ಬಿಟ್ಟವರು ಮತ್ತೆ ತಿರುಗಿ ಬರಲಿಲ್ಲ. ಅವರ ತಂದೆ ದಿವಾನ್ ಬಹದ್ದೂರ್ ಸರ್ ರಂಗರಾಯರು, ಇವರು ಇಂಗ್ಲೆಂಡಿನಲ್ಲಿದ್ದಾಗಲೇ ತೀರಿಕೊಂಡಿದ್ದರು. ಎಸ್ಟೇಟನ್ನು ನೋಡಿಕೊಳ್ಳುವವರು ರಾಜಾರಾಯರ ತಮ್ಮಂದಿರು. ಬಂದ ಉತ್ಪನ್ನದಲ್ಲಿ ಅರ್ಧದಷ್ಟನ್ನು ರಾಯರಿಗೆ ಪಾವತಿ ಮಾಡುತ್ತಿದ್ದರು. ಆದರೆ ಮುಖತಃ ಎಂದೂ ಮಾತನಾಡಲಿಲ್ಲ. ಕಾರಣ, ರಾಜಾರಾಯರಿಗೆ ತಮ್ಮ ಸೋದರರ ಒಲವು ಕಾಂಗ್ರೆಸ್ಸಿನ ಕಡೆ ಇದ್ದುದರಿಂದ ಅವರ ಸೋದರರು ಜೇಲಿಗೆ ಹೋದಾಗ, ಬಹಳ ರೇಗು ರಾಯರಿಗೆ. "ಇವನಿಗೇನು ಕೆಲಸ ಇದ್ದಂತೆ ಕಾಣಲಿಲ್ಲ. ಭಿಕಾರಿಗಳಂತೆ ಜೇಲಿಗೆ ಹೋಗಲು!" ಎಂದು ಹಾರಾಡಿ ಬಿಡುತ್ತಿದ್ದರು. ಅವರ ತಮ್ಮ ಮಾತ್ರ ಎಂದೂ ಸೊಪ್ಪು ಹಾಕಲಿಲ್ಲ ಇವರಿಗೆ. "ಇಂಗ್ಲಂಡಿನಲ್ಲೇ ಹುಟ್ಟಬೇಕಾಗಿತ್ತು ಇವನು" ಎಂದು ನಕ್ಕು ಸುಮ್ಮನಾಗುತ್ತಿದ್ದರು.

ಆದರೆ ವರ್ಷಾಂತ್ಯದಲ್ಲಿ ಹಣ ಬರದಿದ್ದರೆ ದಿನಕ್ಕೊಂದು ಪತ್ರ ಹೋಗುತ್ತಿತ್ತು. "ಇವನೇನು ನನಗೆ ಕೊಟ್ಟುಬಿಟ್ಟದ್ದಾನೆ" ಎಂದು ಅವರ ತಮ್ಮ ಬೇಕೆಂದೇ ನಿಧಾನ ಮಾಡುತ್ತಿದ್ದರು. ಒಟ್ಟನಲ್ಲಿ ರಾಯರು ಚೆನ್ನಾಗಿಯೇ ಕಮಾಯಿಸಿದ್ದರು. ಕೆಲವಾರು ಲಕ್ಷಕ್ಕೆ ಕಡಿಮೆಯಿಲ್ಲ ಎಂದು ಜನರ ತರ್ಕ. ವಿಜಯ, ಮಂಜುಳ ಇಬ್ಬರೇ ಮಕ್ಕಳು. ರಾಯರು ವಿಶ್ರಾಂತರಾಗುವುದಕ್ಕೆ ಮುನ್ನ ಬಹಳ ದರ್ಪನಿಷ್ಠರಾಗಿದ್ದರಂತೆ. ಅವರ ವಯಸ್ಸಿರುವವರೆಗೂ ಬಾಹ್ಯ ನಡತೆಗೆ ಅಂಕೆಯಿರಲಿಲ್ಲ. ಕಾಡಿ, ಬೇಡಿ, ಅಂಗಲಾಚಿ ಏನು ಮಾಡಿದರೂ ರಾಯರು ದಾರಿಗೆ ಬರದೆ ಮತ್ತೂ ಕೈಮೀರಿದ್ದರಿಂದ, ರಾಯರ ಧರ್ಮಪತ್ನಿ ರುಕ್ಮಿಣಿಯಮ್ಮ ನೇಣು ಹಾಕಿಕೊಂಡು ಪ್ರಾಣ ನೀಗಿ ಆಗಲೇ ಇಪ್ಪತ್ತು ವರುಷದ ಹತ್ತಿರಕ್ಕೆ ಬಂದಿತು. ರಾಯರಿಗಿನ್ನೂ ನಡುಪ್ರಾಯ. ಹೆಂಡತಿ ಹೋಗಿದ್ದಕ್ಕೆ ಸಂಕಟಪಡದೆ, ಲಗಾಮು ಹರಿದ ಬೀದಿಕುದುರೆಯಾದರು. ಪ್ರಪಂಚದ ಸಾರಸರ್ವಸ್ವವನ್ನೂ ಅನುಭವಿಸಿದರು. ಅಧಿಕಾರದ ಜರ್ಬಿನಲ್ಲಿ ಹಾಳಾದ ಸಂಸಾರಗಳೆಷ್ಟು, ಉದ್ಧಾರವಾದವುಗಳೆಷ್ಟು ಎಂಬುದಕ್ಕೆ ಲೆಕ್ಕವೇ ಇಲ್ಲ. ಬೆಜವಾಡದ ಒಂದು ರಸ್ತೆಗೆ ರಾಯರ ರಸ್ತೆ ಎಂದೇ ಹೆಸರು ಬಿದ್ದಿದೆ. ರಾಯರು ರಾತ್ರಿಯನ್ನೆಲ್ಲಾ ಅಲ್ಲೇ ಕಳೆಯುತ್ತಿದ್ದುದ್ದು. ಕುಡಿದ ಅಮಲಿನಲ್ಲಿ ಹೊಡೆಯುವದನ್ನು ಸಹಿಸಲಾರದೇ ರುಕ್ಮಿಣಿಯಮ್ಮ ಆತ್ಮಹತ್ಯ ಮಾಡಿಕೊಂಡ

ರೆಂದು ಅಡಿಗೆ ನಾರಾಯಣನ ಹೇಳಿಕೆ.

" ಅಯ್ಯೋ ಸ್ವಾಮೀ, ನಾನಿನ್ನೂ ಆಗ ಹುಡುಗ. ಆ ಅಮ್ಮಾವರು ಕೂಗೋದು ಕೇಳಿ ನನ್ನ ಕರುಳೆಲ್ಲಾ ಹಿಂಡಿದಂತಾಗುತ್ತಿತ್ತು. ಇವೆರಡೇ ಮಕ್ಕಳು. ಈ ದೊಂಬಿಗೆ ಅವೂ ಕೂಡಾ ಒಮ್ಮೆಲೇ ಚೀರುತ್ತಿದ್ದವು. ನನಗೆ ನಿದ್ದೆಯೂ ಇಲ್ಲ. ಭಯವೂ ತಪ್ಪಲಿಲ್ಲ. ಪುಣ್ಯ ಮಾಡಿದ್ದರು ಅಮ್ಮಾ ಅವರು ಕಣ್ಮರೆಯಾಗಿ ಹೋದರು " ಎಂದು ಕಣ್ಣೀರು ಹಾಕುತ್ತಿದ್ದ ನಾರಾಯಣ. ನಾರಾಯಣ ಅನಾಥ. ಅವನನ್ನು ಸಾಕಿ ಸಲಹಿದವರು ರಾಯರ ಹೆಂಡತಿ. ಅದಕ್ಕೇ ಅವನಿಗಷ್ಟು ಅಭಿಮಾನ. ನಾರಾಯಣನ ಈ ಹೇಳಿಕೆ ರಾಯರಿಗೂ ತಿಳಿದಿತ್ತು. ಆದರೆ ಅವನನ್ನು ಓಡಿಸಿದರೆ ಮತ್ತೂ ಅನರ್ಥಕ್ಕೆ ಎಡೆಯಾದೀ ತೆಂದು ಹೆದರಿ, ಸಂಬಳ ಹೆಚ್ಚು ಮಾಡಿ ಬಾಯಿ ಮುಚ್ಚಿಸುವ ಪ್ರಯತ್ನ ಮಾಡಿದ್ದರು. ಆದರೂ ಅವರ ಕಥೆ ಹೊರಬೀಳದೆ ಇರುತ್ತಿರಲಿಲ್ಲ."ನಾರಾಯ ಣನಿಗೇನು, ಚೆನ್ನಾಗಿ ಹೊಗಳಿ ಬಿಟ್ಟರೆ, ಉಬ್ಬಿನ ಮತ್ತಿನಲ್ಲಿ ರಾಯರ ರಾಮಾಯಣ ಹೇಳಿಬಿಡುತ್ತಿದ್ದ. ಮುಖದ ಮೇಲಿನ ಕಳೆ ನೋಡಿದರೇನೇ ರಾಯರು ಎಂಥಾ ಕಲೆಗಾರರು ಅನ್ನೋದು ಗೊತ್ತಾಗುತ್ತೆ.'' ಎಂದು ಬಿಡು ತ್ತಿದ್ದ. ರಾಯರ ಮುಖವೇನೋ ನಿಜವಾಗಿಯೂ ಕಳೆಗೆಟ್ಟಿತ್ತು. ಎಲ್ಲಿ ನೋಡಿದರೂ ಕಪ್ಪು ಕಲೆಗಳೇ. ಅವರು ತಮ್ಮ ದೇಹದಲ್ಲಿ ಸರ್ವ ವ್ಯಾಧಿ ಗಳಿಗೂ ಒಂದೇ ಸಮನಾಗಿ ಉಪಚರಿಸುತ್ತಿದ್ದರು. ವಾರದ ಏಳು ದಿನವೂ ದಿನಕ್ಕೊಂದು ವ್ಯಾಧಿ ಬಾಧಿಸುತ್ತಿತ್ತು. "ಮಗನನ್ನು ತಮ್ಮ ರೋಗ ವಾಸಿ ಮಾಡಲೆಂದೇ ವೈದ್ಯಕೀ ಓದಿಸುತ್ತಿರಬೇಕು." ಎಂದು ರಾಯರ ಮನೆಯ ಪುರೋಹಿತ ರಾಮಾಚಾರ್ಯರ ಹೇಳಿಕೆ. ಆಚಾರ್ಯರಂತೂ ರಾಯರ ರೋಗ ಗಳಿಗೆ ರಾಮಬಾಣ ಮಾಡುತ್ತೇನೆಂದು, ಏನೇನೋ ಪೂಜೆ, ಪುನಸ್ಕಾರ, ಯಜ್ಞಯಾಗ, ಜಪ, ತಪ, ಎಲ್ಲಾ ಮಾಡಿ ದುಡ್ಡು ಕಕ್ಕಿಸಿ ಕೊನೆಗೆ ನೆಲೆ ನಿಂತರು. "ಅವರಿರುವ ಮನೆ, ಈ ಪೂಜೆಯ ಮನೆಯೇ ಅಲ್ಲವೇ. ಪೂಜೆಯ ದುಡ್ಡು ಬಟ್ಟೆ. ಎಲ್ಲಾ ಆವರದೇ. ಪುಣ್ಯ ಮಾಡಿದ್ದ ಆಚಾರಿ. ಮುಂಬಯಿ ಯಲ್ಲಿ ಮನೆ ಕಟ್ಟಿಸಿಬಿಟ್ಟ'' ಎಂದು ನಾರಾಯಣ ಕೂಗಿ ಬಿಡುವ. "ಅನ್ನು ನಿನಗೆ ದೇವರು ಬಾಯಿ ಕೊಟ್ಟಿದ್ದಾನೆ. ಪಾಪ ಪುಣ್ಯ ಅವನು ನೋಡಿಕೊ ಳ್ಳುತ್ತಾನೆ'' ಎಂದು ತತ್ವ ಬೋಧೆ ಮಾಡುತ್ತಿದ್ದರು. ಮತ್ತೊಮ್ಮೆ "ನೀನು

ಹುಚ್ಚ ಕಣೋ ನಾರಾಯಣ, ದಕ್ಕಿದಷ್ಟನ್ನು ದಕ್ಕಿಸಿಕೊಳ್ಳೋ'' ಎಂದು ಬುದ್ಧಿ ಹೇಳುವರು. "ನಾನು ಯಾರಿಗೆ ಮಾಡಲಿ ಆಚಾರ್ರೇ. ಏನೋ ಆ ಅಮ್ಮನ ಪುಣ್ಯದಿಂದ ಸುಮ್ಮನೆ ನಡೆದು ಹೋಗುತ್ತಾ ಇದೆ ಅಂತ ಸುಮ್ಮನಾಗಿಬಿಟ್ಟಿದ್ದೇನೆ." ಎನ್ನುತ್ತಿದ್ದ. "ಪಾಪ, ಹೆಂಡತಿ ಕಳೆದುಕೊಂಡು ಬೇಸರ ಹೊಂದಿದ್ದೀಯ" ಎಂದು ಆಚಾರ್ಯರೂ ಮರುಗುವರು.

ವಿಜಯ ಜ್ಯೇಷ್ಠಪುತ್ರ, ಹಕ್ಕುದಾರನೆಂದಮೇಲೆ ಅವನನ್ನು ತಡೆಯುವವರಾರುಂಟು ? ಅವನು ಆಡಿದ್ದೇ ಆಟ, ಮಾಡಿದ್ದೇ ಮಾಟ. ಕೆಲವೊಮ್ಮೆ ಎರಡು ಮೂರು ದಿನಕ್ಕೊಂದು ಸಲ ಮನೆ ಸೇರಿದ್ದೂ ಉಂಟು. ತಂದೆಗಂತೂ ಏಳಲೂ, ಕೂಡಲೂ, ಮೂರು ದಿನ ಬೇಕು ಎಂದು ಅವನಿಗೆ ಗೊತ್ತು. ಲೆಕ್ಕ ಹಾಕಿಕೊಂಡೇ ನೈಟ್ ಕ್ಲಬ್, ಪಿಕ್‌ನಿಕ್, ಡ್ಯಾನ್ಸ್, ಯಾವುದೋ ಕಾರ್ಯಕ್ರಮ ಹಾಕಿಕೊಂಡು ಕಾರು ತೆಗೆದುಕೊಂಡು ಹೋಗಿಬಿಡುತ್ತಿದ್ದ. ಮನೆಯಲ್ಲಿ ಇದ್ದರೂ ಯಾವುದೋ ಕೋಣೆಯಲ್ಲಿ ಇರುತ್ತಿದ್ದ. ಊಟ ಮಾಡುವಾಗಲೇ ಅವನು ಮಹಡಿಯಿಂದ ಕೆಳಗೆ ಬರುತಿದ್ದ. ಹಣಕ್ಕೇನೂ ಕೊರತೆಯಿಲ್ಲ ಅವನಿಗೆ. ಮಂಜುಳೆಯೂ ಅವನಷ್ಟೇ ಬೇಜವಾಬ್ದಾರಿ. ಮಹಿಳಾ ಸಮಾಜ, ಲೇಡೀಸ್ ಕ್ಲಬ್, ವೈ. ಡಬ್ಲ್ಯು, ಸಿ. ಎ, ರಿಕ್ರಿಯೇಶನ್ ಪಾರ್ಟಿ, ಗಾರ್ಡನ್ ಷೋ, ಸಿನಿಮಾ, ನಾಟಕ, ಅಲ್ಲಿ ಇಲ್ಲಿ ಸಂಜೆಯ ವರೆಗೂ ತಿರುಗಿದ್ದೇ ತಿರುಗಿದ್ದು. ಮನೆಯಲ್ಲಿರುವ ವರೆಗೂ, ತಲೆಯ ಕೂದಲಿಗೆ ನೂರಾರು ಅಲಂಕಾರ, ಕೈಬಳೆಗಳ ಬಣ್ಣ ಹೊಂದಿಸುವಿಕೆ, ಸೀರೆ ಉಡುವಿಕೆ, ಅಂಚಿನ ಅಳತೆ, ಕುಂಕುಮದ ಚಿತ್ರ, ಇನ್ನುಳಿದ ಅಲಂಕಾರಗಳಲ್ಲೇ ಕಾಲಕಳೆಯುತ್ತಿದ್ದಳು. ಅಷ್ಟರಲ್ಲೇ ಯಾರಾದರೂ ಜೊತೆಗಾರರು ಬರುವರು. ಸರಿ ಅಲ್ಲಿಂದ ಕಾರಿನಲ್ಲಿ ಓಡಾಟ ಪ್ರಾರಂಭ.

ಜಯರಾಮನಿಗೂ, ವಿಜಯನಿಗೂ ಹೇಗೆ ಸ್ನೇಹ ಬೆಳೆಯಿತೆಂಬುದಿನ್ನೂ, ರಾಮನ ಸ್ನೇಹಿತರಿಗೆ ಸಮಸ್ಯೆಯಾಗುಳಿದಿದ್ದರೂ ಅವರಾಗಲೇ ಬಹಳ ನಿಕಟವರ್ತಿಗಳಾಗಿ ಹೋಗಿದ್ದರು. " Student life ನಲ್ಲೇ ಮಜಾ ಇರೋದು. ನಾಳೆ life ನಲ್ಲಿ ಹೀಗೆ ಬರೋಲ್ಲ. ಈಗ್ಲೇ Enjoy fully" ಎಂದು ವಿಜಯನ ಬೋಧೆ. ರಾಮನಿಗೂ ಸೊಗಸೆನಿಸಿತು. "ದೊಡ್ಡವರ ಸಹವಾಸ, ಹುಷಾರಾಗಿರೋ, ರಾಮು'' ಎಂದು ಸತ್ಯನ ಬುದ್ಧಿವಾದ.

ಸತ್ಯಮೂರ್ತಿ, ರಾಮನಿಗೆ ಮೊದಲಿಂದಲೂ ಆಪ್ತ. ಒಂದೇ ಊರಿನವರು. ಅಲ್ಲದೆ ಒಂದೇ ಕೋಡಿಯಲ್ಲಿದ್ದವರು. ಈಗ ಮಾತ್ರ ಬೇರೆ ಬೇರೆ ಕೋಣೆಗಳಲ್ಲಿದ್ದರೂ ಹೃದಯಗಳು ಒಂದೇ ಆಗಿದ್ದುವು. ಸತ್ಯ ಬಹಳ ಸರಳ ಜೀವಿ. ಇವನ ಹಾಗೆಯೇ ಶಿಸ್ತುಗಾರನಾದರೂ ಹಿಡಿತವಿತ್ತು. ಸ್ನೇಹಿತರಲ್ಲಿ ಬಹಳ ಅಭಿಮಾನ. ಆತ ಗುಣವಂತನೆಂದೇ ಮಂಗಳೂರಿನ ಸೀತಾರಾಮರಾಯರು ತಮ್ಮ ಮಗಳನ್ನು ಕೊಟ್ಟು ಹೋದ ವರ್ಷ ತಾವೇ ಮದುವೆ ಮಾಡಿದ್ದರು. ಮೊದಲಿನಿಂದಲೂ ಅವರೇ ಅವನಿಗೆ ಹೆಚ್ಚು ಸಹಾಯ ಮಾಡಿದ್ದರು. ಕಾಲೇಜಿಗೆ ಬಂದಮೇಲಷ್ಟೆ ಆತನ ಚಿಕ್ಕಪ್ಪ ಅವನನ್ನು ಕಣ್ಣೆತ್ತಿ ನೋಡುವಂತಾದುದು. ಸತ್ಯನ ತಂದೆ ತಾಯಿ ಹೋದಾಗ ಅವನು ಹೈಸ್ಕೂಲಿನಲ್ಲಿದ್ದ. ಪಕ್ಕದ ಮನೆ ಸೀತಾರಾಮರಾಯರು ಮೂರು ವರ್ಷವೂ ಅವನ ಜಾಣ್ಮೆಗೆ ಮೆಚ್ಚಿ ಅವನನ್ನು ಮನೆಯಲ್ಲೇ ಇಟ್ಟುಕೊಂಡರು. ಅವನ ಚಿಕ್ಕಪ್ಪನ ಆಸ್ತಿಗೆ ಇವನೇ ವಾರಸುದಾರನಾದನಂತರ ವೈದ್ಯಕೀ ಓದಲು ಮುಂಬಯಿಗೆ ಬಂದ. ಸೀತಾರಾಮರಾಯರು ತನಗೆ ಸಹಾಯ ಮಾಡಿದ್ದರಿಂದ ಕೃತಜ್ಞತೆ ಎಂಬಂತೆ ಅವರ ಒಬ್ಬಳೇ ಮಗಳನ್ನು ಮದುವೆಯಾದ. ಆತನ ಗಂಭೀರತನಕ್ಕೆ ಸ್ನೇಹಿತರೆಲ್ಲರೂ ಮೆಚ್ಚಿಹೋಗಿದ್ದರು. ಇತ್ತೀಚೆಗೆ ರಾಮನಿಗೇಕೋ ಅವನನ್ನು ಕಂಡರೆ ಆಗುತ್ತಿರಲಿಲ್ಲ. ಕಾರಣ ವಿಜಯನ ಸ್ನೇಹಕ್ಕೆ ಆತ ವಿರುದ್ಧ. ಕೊನೆಗೆ ಸತ್ಯ ನಿರಾಶನಾಗಿ ರಾಮನ ಕೈ ಬಿಟ್ಟೇ ಬಿಟ್ಟ. ಜಯರಾಮ ಹುಲಿಯ ಬಣ್ಣಕ್ಕೆ ನರಿ ಮೈ ಸುಟ್ಟುಕೊಂಡಂತೆ ವಿಜಯನ ಮಟ್ಟಕ್ಕೇರಲು ಹವಣಿಸಿದ. ವಿಜಯನಿಗೆ ತನ್ನ ಕೋಣೆಯೂ ಒಂದೇ, ರಾಮನ ಕೋಣೆಯೂ ಒಂದೇ ಆಗಿತ್ತು. ಅಲ್ಲಿಯೂ ಅಷ್ಟು ಉಡುಪುಗಳು, ಇಲ್ಲಿಯೂ ಅಷ್ಟು ಉಡುಪುಗಳು. ಕೈಯಲ್ಲಿ ಎಡೆಬಿಡದೆ " State Express " ಸಿಗರೇಟ್ ಡಬ್ಬಿ. "Concentration ಗೆ Best Medicin" ರಿ ಇದು. ಎಂದು ರಾಮನಿಗೆ ತಲೆ ತುಂಬಿ, ಸೇದಲು ಹವಣು ಮಾಡಿಕೊಟ್ಟ. ಹೀಗೇ ರಾಮ ಬದಲಾಯಿಸುತ್ತಾ ನಡೆದೇ ಬಿಟ್ಟ.

ರಾಮ ಅಂದಿನ ಸಾಯಂಕಾಲ ವಿಜಯನ ಮನೆಗೆ ಹೋದಾಗ ಆಗಲೇ ಮಬ್ಬುಗತ್ತಲೆ. ಮನೆಯಲ್ಲಂತೂ ಯಾರೂ ಇದ್ದ ಸುಳಿವೇ ಕಾಣಲಿಲ್ಲ. ನೆಟ್ಟಗೆ ಅಟ್ಟ ಹತ್ತಿ ವಿಜಯನ ಕೋಣೆಗೆ ನಡೆದ. ಬಾಗಿಲು ಹಾರಿಹೊಡೆ

ದಿತ್ತೇ ಹೊರತು ಒಳಗಡೆ ಯಾರೂ ಇದ್ದಂತೆ ಕಾಣಲಿಲ್ಲ. ಪಕ್ಕದ ಕೋಣೆಯಲ್ಲಿ ದೀಪ ಮಾತ್ರ ಕಾಣಿಸುತ್ತಿತ್ತು. ಆದರೆ ಬಾಗಿಲು ಮುಚ್ಚಿತ್ತು. ರಾಮು ಧೈರ್ಯಮಾಡಿ, ಯಾರಾದರೂ ಇದ್ದುಕೊಳ್ಳಲಿ ಎಂದು, "ವಿಜಯಾ" ಎಂದು ಗಟ್ಟಿಯಾಗಿ ಒಮ್ಮೆ ಕೂಗಿದ. ಬಾಗಿಲು ತೆಗೆದು ಹೊರಗೆ ಬಂದವಳು ಮಂಜುಳೆ! ಆಕೆಯ ಉಡುಪಿನ ಅಲಂಕಾರ ಸಂಭ್ರಮ ನಡೆದಿತ್ತಾದ ಕಾರಣ ಅರೆಬತ್ತಲೆಯಾಗಿಯೇ ಬಂದಿದ್ದಳು. ಸುಖದಿಂದ ಬೆಳೆದ ಕೆಂದೋಳುಗಳು, ಕೊಬ್ಬಿದೆದೆ, ಯೌವ್ವನದಿಂದ ಸೊಕ್ಕಿ ಬಂದಿದ್ದ ಸುಂದರ ವರ್ಣ, ಸಡಿಲವಾಗಿ ಹಾಕಿದ ಹೆರಳು,ಮುಖಕ್ಕಿನ್ನೂ ಅರ್ಧ ಬಡಿದಿದ್ದ ಪೌಡರ್, ಇವಿಷ್ಟೇ ಎದ್ದು ಕಾಣುತ್ತಿದ್ದವು. ಕ್ಷಣವೊಂದರಲ್ಲೇ ರಾಮು ಅಷ್ಟನ್ನೂ ವೀಕ್ಷಿಸಿದ. ನರಗಳನ್ನು ಎಣಿಸುವವರಿಗೆ ಮೈ ಕಾಣಿಸವೇ? "Sorry, ಬಂದ್ಬಿಟ್ಟೆ. ಕೂತ್ಕೊಳ್ಳಿ. "ಬಾತ್ ರೂಮ್" ಗೆ ಹೋಗಿದ್ದಾನೆ ವಿಜಯ" ಎಂದು ಮೃದುವಾಗಿ ನಕ್ಕು ಕೋಣೆಗೆ ಸರಿದಳು. ಹೆಣ್ಣು ಎಂಥ ಮಾಯಾವಿ! ಮೋಹಿನಿ! ಜಯರಾಮ ಮಂಜುಳೆಯ ನಿಜ ರೂಪವನ್ನು ಇನ್ನಷ್ಟು ಹೊತ್ತು ನೋಡಬೇಕೆಂದು ಹಾತೊರೆದ. ಆದರೆ ದೃಶ್ಯವಾಗಲೇ ಮಾಯವಾಗಿತ್ತು. ಹಾಗೆಯೇ ನಡೆದು ವಿಜಯನ ಕೋಣೆಗೆ ಹೋಗಿ ಕುಳಿತ. "ಸ್ಟೇಟ್ ಎಕ್ಸಪ್ರೆಸ್" ಡಬ್ಬಿ ಅವನ ಸೇವೆಗೆ ಸಿದ್ಧವಾಗಿತ್ತು. ಸಿಗರೇಟ್ ಹೊತ್ತಿಸಿ, ತನ್ನ ಮನಸ್ಸಿನ ತೊಡಕಿನ ಯೋಚನೆಯನ್ನೇ ತೋರುವಂತೆ ಹೊಗೆಯನ್ನು ಸುರುಳಿ ಸುರುಳಿಯಾಗಿ ಬಿಡುತ್ತಿದ್ದ. ಅಷ್ಟರಲ್ಲೇ ವಿಜಯನೂ 'ಹಲ್ಲೋ' ಎನ್ನುತ್ತಾ ಹಾಜರಾದ. ವಿಶ್ವಾಮಿತ್ರನ ತಪೋಭಂಗವಾಯಿತು. "ಏನ್ರಿ, ಲೈಟ್ ಕೂಡಾ ಹಾಕದೆ ಕತ್ತಲಲ್ಲೇ ಕೂತುಬಿಟ್ಟದ್ದೀರಿ?" ಎಂದ ವಿಜಯ. ನಿಜವಾಗಿಯೂ ರಾಮು ತನ್ನನ್ನೇ ಮರೆತು ಬಿಟ್ಟಿದ್ದ. ಅಂಥದರಲ್ಲಿ ಲೈಟಿನ ಯೋಚನೆ ಎಲ್ಲಿ ಬರಬೇಕು. "ಲೈಟ್ ಹಾಕಿಬಿಟ್ಟು ಮಾಡಬೇಕಾದ ರಾಜಕಾರ್ಯವೇನೂ ಇರಲಿಲ್ಲವಲ್ಲ" ಎಂದು ತನ್ನ ಮನಸ್ಸಿನ ತಳಮಳವನ್ನು ಅದುಮಿದ. ಇನ್ನೂ ಶಾಂತತೆ ಬರಲಿಲ್ಲವಾದ್ದರಿಂದ, ಮತ್ತೊಂದು ಸಿಗರೇಟ್ ಹೊತ್ತಿಸಿದ. ವಿಜಯನಿನ್ನೂ ತಲೆ ಹಿಕ್ಕುವುದರಲ್ಲೇ ಮಗ್ನನಾಗಿದ್ದ. ಮನೋದ್ವೇಗವನ್ನು ಇನ್ನೂ ಹೆಚ್ಚಿಸುವಂತೆ, ಮಂಜುಳೆಯೂ ಸರ್ವಾಲಂಕಾರ ಪ್ರಾಯಳಾಗಿ ಕೋಣೆಗೆ ಬಂದಳು. "ವಿಜಯ ಚಹಾ ಸಿದ್ಧವಾಗಿದೆ, ಇಲ್ಲಿಗೇ ಬಂದುಬಿಡಲಿ

ತಾನೆ" ಎಂದಳು. "ಹುಂ" ಎಂದು ಒಪ್ಪಿಗೆ ಕೊಟ್ಟ ವಿಜಯ. " ಏನೂ ಬೇಡಪ್ಪಾ ವಿಜಯ. ಈಗ್ತಾನೆ ಮುಗಿಸಿಕೊಂಡು ಬಂದೆ " ಎಂದು ರಾಮು ನುಡಿಯುವಂತೆ ನುಡಿದ. ಮಂಜುಳೆ ಆಗಲೇ ಪೂರ್ಣ ಸಿದ್ಧಳಾಗಿ ಟ್ರೇಯಲ್ಲಿ ಟೀ ಬಿಸ್ಕತ್ತು ಪಾಕೆಟ್ ಒಂದು ತಂದಳು. ವಿಜಯನೇ ಮೊದಲು ಕೈಹಾಕಿ ನಾಲ್ಕು ಬಿಸ್ಕತ್ತು ಹಿಡಿದ. ''ತಗೊಳ್ಳಿ ರಾಮು, ಯಾಕಿವತ್ತು ಒಂದು ಥರಾ ಇದ್ದೀರಲ್ಲ'' ಎಂದೇ ಬಿಟ್ಟ ವಿಜಯಾ, ರಾಮನ ಮನಸ್ಸನ್ನು ಕೆಣಕುವಂತೆ. ಪ್ರಮಾದವಾದೀತೆಂಬ ಭಯದಿಂದ ''ಥೂ ಏನು ಬಂತು'' ಎಂದು ಚಟ್ಟನೆ ತಾನೂ ಬಿಸ್ಕತ್ತಿಗೆ ಕೈಹಾಕಿದ. ಮಂಜುಳೆ ಕೆಟಲ್‌ನಿಂದ ಇನ್ನೂ ಟೀ ಸುರಿಯುವ ಕಾರ್ಯದಲ್ಲಿದ್ದಳು. ರಾಮನಿನ್ನೂ ಓರೆಗಣ್ಣಿನಿಂದ ಆಕೆಯ ಕೈಗಳನ್ನೇ ನೋಡುತ್ತಿದ್ದ. ಜಾರಿದ ಸೀರೆಯ ಸೆರಗಿನಿಂದ ತುಂಬಿದ ಎದೆಯ ಪಾರ್ಶ್ವವಷ್ಟು ಕಾಣುತ್ತಿತ್ತು. ತಪ್ತನಾಗಿ ಬಿಸ್ಕತ್ತು ಕಡಿಯುತ್ತಲೇ ಇದ್ದ. ಚಹಾವನ್ನು ತಯಾರು ಮಾಡಿ ಮಂಜು ಇಬ್ಬರಿಗೂ ಕೊಟ್ಟಳು. ನಂತರ ತಾನೂ ಒಂದೆರಡು ಬಿಸ್ಕತ್ತು ತಿಂದಳು. ರಾಮನ ದೃಷ್ಟಿ ಇನ್ನೂ ಚಲಿಸಿರಲಿಲ್ಲ! ಮಂಜು ಏಕೋ ಥಟ್ಟನೆ ಮುಖ ತಿರುಗಿಸಿದಳು. ರಾಮನ ದೃಷ್ಟಿ! ನಾಲ್ಕು ಕಣ್ಣುಗಳೂ ಒಂದೇ ಕ್ಷಣ ಕೂಡಿದವು. ವಿಜಯ ಗುನುಗುನು ಅನ್ನುತ್ತಾ ಬಟ್ಟೆ ಬದಲಾಯಿಸಲು ಬೇರೆ ಕೋಣೆಗೆ ನಡೆದ. ಜಯರಾಮನಿನ್ನೂ ತಲೆ ಬಗ್ಗಿಸಿಕೊಂಡು ಚಹಾ ಕುಡಿಯುತ್ತಲೇ ಇದ್ದ. ''ಇನ್ನಷ್ಟು ಚಹಾ ಹಾಕಲೇನು, ಬಹಳ ಉಳಿದ ಹಾಗಿದೆ " ಎಂದಳು ಮಂಜು. ''ಇಲ್ಲ, ಇಲ್ಲ, ಇಲ್ಲ. ಸಾಕು ಇದೇ ಬೇಕಾದಷ್ಟಾಗಿದೆ''ಎಂದ ರಾಮ. ''ಅಯ್ಯೋ, ಹಾಗಂದರೇನು ತಗೊಳ್ಳಿ" ಎಂದು ರಭಸದಿಂದ ಎದ್ದು, ರಾಮ ಹಿಡಿದ ಅಡ್ಡ ಕೈಯನ್ನು ಒಂದು ಪಕ್ಕಕ್ಕೆ ಸರಿಸಿ, ಮಂಜು ಇನ್ನೊಂದಿಷ್ಟು ಚಹಾ ಸುರಿದೇ ಬಿಟ್ಟಳು. ಮೃದು ಹಸ್ತದ ಬಂಧನಕ್ಕೆ ರಾಮನ ಕೈಯ್ಯಶಕ್ತಿ ಉಡುಗಿ ಹೋಗಿತ್ತು. ಮುಖವೆತ್ತಿ ನೋಡಿದ; ಮಂಜುಳೆ ಅರ್ಥಪೂರ್ಣವಾದ ತುಂಬು ನಗೆ ನಕ್ಕಳು. ಮತ್ತೊಮ್ಮೆ ನಾಲ್ಕು ದೃಷ್ಟಿಗಳೂ ಅಚಲವಾಗಿ ನಿಂತುವು. ಮಂದಹಾಸವಿನ್ನೂ ಅಡಗಿರಲೇ ಇಲ್ಲ.

ರಾಮನಿಗೆ ಅಂದಿನ ಸಾಯಂಕಾಲದ ನೂತನವಾದ ವಿಶೇಷ ಅನುಭವ, ಘಟನೆಗಳಿಂದ ರಾತ್ರಿ ನಿದ್ದೆ ಬರುವುದೇ ಪ್ರಯಾಸವಾಯಿತು. ಮಂಜುಳೆಯ

ನಳಿದೋಳ್ಗಳ ಬಂಧನವಿನ್ನೂ ಹಾಗೇ ಇದ್ದಂತೆ ಅವನಿಗೆ ಭಾಸ. ಎಷ್ಟು ಒತ್ತಿ ಕಣ್ಣು ಮುಚ್ಚಿದರೂ ಆಕೆಯ ಅರ್ಧ ನಗ್ನ ದೇಹದ ಚಿತ್ರ ಮರೆಯಾಗಲಿಲ್ಲ. ಮಂದಹಾಸಕ್ಕಿಂತ ತುಂಬಿದೆದೆ, ಅದಕ್ಕಿಂತ ಮೈ ಬಣ್ಣ, ಎಲ್ಲಕ್ಕೂ ಮೀರಿದ ಚಂಚಲಪೂರ್ಣವಾದ ತುಂಟ ಕಣ್ಣುಗಳು, ಒಂದಕ್ಕಿಂತ ಒಂದು ಅವನ ಮನಸ್ಸನ್ನು ಸೆರೆ ಹಿಡಿದಿದ್ದವು. ಹಾಗೂ ಹೀಗೂ ಹೊರಳಾಡಿ, ಉರುಳಾಡಿ ಎಂಥೆಂಥವೋ ಸ್ವಪ್ನಗಳನ್ನು ಕಾಣುತ್ತಾ ಬೆಳಗು ಕಂಡ.

ಪರೀಕ್ಷೆ ಮುಗಿದ ದಿನವೇ ವಿಜಯನ ಆಹ್ವಾನದಮೇಲೆ ಜಯರಾಮ ಊಟಕ್ಕೆ ಹೋದ. ರಾವ್ ಬಹದ್ದೂರರು ಬಾಗಿಲಲ್ಲೇ ಆರಾಮಾಸನದ ಮೇಲೆ ಕಾಲುಚಾಚಿ ಕುಳಿತಿದ್ದರು. ''ಓಹೋ ಬಾರಪ್ಪ ಜಯ. ಏನು ಇಷ್ಟುದಿವಸ ಕಾಣಿಸುತ್ತಲೇ ಇರಲಿಲ್ಲವಲ್ಲ" ಎಂದು ಎದ್ದು ಮುಂಬಾಗಿದರು ''ಬರುತ್ತಾ ಇದ್ದೆ. ಆದರೆ ನೀವು ಮಲಗಿರುತ್ತಿದ್ದಿರಿ ಅಂತ ತೊಂದರೆ ಮಾಡ್ತಾ ಇರಲಿಲ್ಲ'' ಎಂದು ಹೇಳಿಕೊಂಡ. 'ಕೂತ್ಕೋ, ಯಾಕೆ ನಿಂತಿದೀಯ' ಎಂದು ಪಕ್ಕದ ಕುರ್ಚಿ ತೋರಿಸಿದರು ರಾಯರು. ಜಯರಾಮ ಕುಳಿತ. ''ಮುಂದೇನು ಮಾಡಬೇಕಂತ ಇದ್ದೀಯಾ" ಎಂದು ಗಂಭೀರವಾದ ಪ್ರಶ್ನೆಯನ್ನೇ ಅವರು ಹಾಕಿದರು. ರಾಮುನಿಗೆ ಸ್ವಲ್ಪ ದಿಗಿಲು ಬಂದಂತಾಯ್ತು. ಇನ್ನೂ ಆತ ಯೋಚನೆಯನ್ನೇ ಮಾಡಿರಲಿಲ್ಲ. ''ಎಲ್ಲಾ ಮನೆಗೆ ಹೋಗಿ ಬಂದ ಮೇಲೆ ಅದರ ವಿಚಾರ ಸಾರ್. ಅಲ್ಲೀ ವರೆಗೂ ಎಲ್ಲಾ ಅನಿಶ್ಚಿತ" ಎಂದು ಮಾತಿಗೆ ಬ್ರೇಕ್ ಹಾಕಲು ಹವಣಿಸಿದ.

''ನೋಡಿ ಈಗಿನ್ಕಾಲಕ್ಕೆ ಸ್ವತಂತ್ರ ವ್ಯವಹಾರವೇ ಒಳ್ಳೇದು. ಇಲ್ಲೇ ಯಾವುದಾದರೂ ಮನೆ ಹಿಡಿದು ಸುರು ಮಾಡ್ಬಿಡಿ. ನೀವು ಮಾಡಿದ್ದಕ್ಕೆ ಮನೆಯವರೇನು ಹೇಳುತ್ತಾರೆ" ಎಂದು ಬಹುವಚನ ಸೇರಿಸಿದರು. ಅಷ್ಟರಲ್ಲೇ ವಿಜಯ ಬಂದು ಜಯರಾಮುನನ್ನು ಊಟಕ್ಕೆ ಎಬ್ಬಿಸಿದ. 'ಇವೇ ನಮ್ಮ ಮನೆಯಲ್ಲಿ ನಿನ್ನ ಕಡೇ ಊಟ' ಎಂದು ಉಪಚರಿಸಿದರು ರಾಯರು.

ಮತ್ತೆ ಮಂಜುಳೆಯ ಹಸನ್ಮುಖ ರಾಮುನನ್ನು ಎದುರುಗೊಂಡಿತು. ಆಕೆಯೇ ಬಡಿಸುವದಕ್ಕೆ ನಿಂತು ಬಿಟ್ಟಿದ್ದಳು. ಜಯರಾಮ ಆಗಲೇ ಹೊಟ್ಟೆ ಸವರಿಕೊಂಡ. ಇನ್ನು ಈಕೆ ಸುಮ್ಮನೇ ಬಿಡುವವಳಲ್ಲ ಎಂದು ಮನದಲ್ಲೇ ಮರುಗಿದ. ಇವನು ಯೋಚಿಸಿದಂತೆಯೇ ಮಾಡಿದಳು ಮಂಜುಳೆ

ಹೊಟ್ಟೆತುಂಬಿ ಕುತ್ತಿಗೆಗೆ ಬರುವಂತಿದ್ದರೂ ಮತ್ತೂ ಎರಡು ಲಾಡುಗಳನ್ನು ಇಟ್ಟೇ ಬಿಟ್ಟಳು! ರಾಮು ನಿಟ್ಟುಸಿರುಬಿಟ್ಟು ಹಣೆಯ ಮೇಲಿನ ಬೆವರೊರಸಿ, ಮುಖ ಗಂಟಿಕ್ಕಿ ಸುಮ್ಮನೆ ನುಂಗಿದ. ಪುಷ್ಕಳವಾದ ಭೋಜನ ಮುಗಿಸಿ ಮತ್ತೆ ರಾಯರ ಸನ್ನಿಧಿಗೆ ಬಂದರು. ಎಲೆಯಡಿಕೆ ಜಗಿಯುತ್ತಾ ರಾಯರು ಅವನಿಗೆ ಇನ್ನೂ ಸಲಹೆ ಕೊಡುತ್ತಲೇ ಇದ್ದರು. ಮಂಜುಳೆಯೂ ಊಟ ಮುಗಿಸಿ ಮತ್ತೆ ಹಾಜರು! "ವಿಜಯಾ, ಒಳ್ಳೇ ಸಿನೇಮಾ ಬಂದಿದೆ ಕಾಣೋ. ಮೆಟನಿಗೆ ಹೋಗ್ಬಿಡೋಣ. ಅಲ್ಲಿಗೆ ಪ್ರೊಗ್ರಾಂ ಎಲ್ಲ ಆಗಿ ಬಿಡುತ್ತೆ'' ಎಂದು ಸಲಹೆ ಕೊಟ್ಟಳು. ಒಳ್ಳೇ ಸಿನೇಮಾ ಹೆಸರು ಕೇಳಿ ರಾಮುನಿಗೂ ಕಿವಿ ನೆಟ್ಟಗೆ ನಿಂತುವು. ಅವನ ಮನವೂ ಒಲಿಯಿತು. ಇವನ ಮನಸ್ಸನ್ನೇ ಪಡಿ ನುಡಿಯುವಂತೆ ವಿಜಯ ''ಹೂಂ" ಎಂದ "ಹೋಗ್ಬನ್ನಿ'' ಎಂದು ರಾಯರೂ ದನಿಗೂಡಿಸಿಬಿಟ್ಟರು.

ಮಿಂಚಿನ ವೇಗದಲ್ಲಿ ಕಾರು ಸಿನಿಮಾ ಮಂದಿರಕ್ಕೆ ತಂದಿಳಿಸಿತು. ಇವರು ಹೋಗುವ ವೇಳೆಗಾಗಲೇ ಚಿತ್ರ ಪ್ರಾರಂಭವಾಗಿತ್ತು. ಕತ್ತಲಲ್ಲೇ ಸ್ಥಳ ಹುಡುಕಿ ಕುಳಿತರು. ಮಧ್ಯದಲ್ಲೇ ಮಂಜುಳೆ. ಇಕ್ಕೆಲಗಳಲ್ಲೂ ರಾಮು ವಿಜಯ. ಮುಖಕ್ಕೆ ಹಚ್ಚಿದ ಸುವಾಸನೆಯ ಪೌಡರ್ ಸ್ನೋಗಳೊಡನೆ ಕಲೆಯ ಬ್ರಿಲಿಯಂಟೈನ್ ವಾಸನೆಯೂ ಸೇರಿ ಜಯರಾಮನ ಮನವನ್ನು ಅಪಹರಿಸಿದವು. ಚಿತ್ರದ ಮೇಲೆ ಕಣ್ಣು ಇದ್ದರೂ, ಮನಸ್ಸು ನೆಲೆಯಿಲ್ಲದೆ ಅಲೆಯುತ್ತಿತ್ತು. ಕರವಸ್ತ್ರದ ಮುಖ ಒರಸುವ ಭರದಲ್ಲಿ ಆಕೆಯ ಕೈ ಇವನಿಗೆ ಸ್ಪರ್ಶವಾದೊಡನೆ ಮೈ ಪುಲಕಿತವಾಗುತ್ತಿತ್ತು. ಆಕೆಗೂ ಪೂರ್ಣ ಮನಸ್ಸು ಚಿತ್ರದ ಮೇಲಿದ್ದಂತೆ ಕಾಣಲಿಲ್ಲ. ನಿಮಿಷ ನಿಮಿಷಕ್ಕೂ ಕೂತ ಕುರ್ಚಿಯಲ್ಲಿ ಒದ್ದಾಡುತ್ತಿದ್ದಳು. ರಾಮುನಿಗೂ ಈಕೆಯ ಚಲನೆಯಿಂದ ಮನಸ್ಸಿಗೆ ಸ್ಥಿರತೆ ಬರಲಿಲ್ಲ.

ಸಿನಿಮಾ ಬಿಟ್ಟನಂತರ ಕಾರಿನಲ್ಲಿ ಮತ್ತೆ ಮನೆಗೆ ಯಾತ್ರೆ. ರಾಮುನ ದೃಷ್ಟಿ ಕಾರಿನಿಂದ ಹೊರಗೆ ಶೂನ್ಯವಾಗಿತ್ತು. ''ಇದೇನಯ್ಯ, ರಾಮ್ ಚಿಂತೆ ಯಾಕೆ?" ಎಂದು ಅವನ ಸ್ವಪ್ನಾವಸ್ಥೆ ಮುರಿದ.

''ಚಿಂತೆ ಏನ್ಬಂತೋ ಅದರಲ್ಲಿ. ಹಾಗೇನೆ ಸಿನಿಮಾ ಕಥೆ ಬಗ್ಗೆ ಯೋಚನೆಮಾಡ್ತಾ ಇದ್ದೆ."

"ಅಹ್ದುರಿ, ಆದರೆ ಅದರಂತೆ ನಡೆಯುವುದು ಕಷ್ಟ." ಎಂದ ವಿಜಯ.

"ಅದು ಅವನವನ ಮೇಲೆ ಅವಲಂಬಿಸಿದೆ."

"ಎಲ್ಲಾ ಸುಳ್ಳು ಕಾಣೋ. ನಿತ್ಯ ಜೀವನದಲ್ಲಿ'' ಎಂದು ಕೈ ಕೊಡವಿ ಬಿಟ್ಟ ವಿಜಯ.

ರಾಮು ಮರುದಿನ ಊರಿಗೆ ಹೊರಡಲು ನಿರ್ಧಾರ ಮಾಡಿಬಿಟ್ಟ. ಸತ್ಯನೂ ಹೊರಡಲು ಸಿದ್ಧತೆ ನಡೆಸಿದ್ದನಾದರೂ ದಿನವನ್ನು ಗೊತ್ತು ಮಾಡಿರಲಿಲ್ಲ. ಅಂದು ಪರೀಕ್ಷೆಗಳೆಲ್ಲವೂ ಮುಗಿದ ನಿಮಿತ್ತ ಹಾಸ್ಟಲಿನ ವಾರ್ಡನ್ ವಿಶೇಷ ಊಟದ ಏರ್ಪಾಡು ನಡೆಸಿದ್ದರು. ಸ್ನೇಹಿತರೆಲ್ಲರೂ ಒಟ್ಟಿಗೇ ಕೂಡಿ ಒಮ್ಮೆ ಊಟ ಮಾಡಲೆಂದು ಅವರ ಈ ಯತ್ನ. ರಾಮು ಕೋಣೆಯಲ್ಲಿ ಪುಸ್ತಕ, ಬಟ್ಟೆ, ಪೆಟ್ಟಿಗೆ ಎಲ್ಲವನ್ನೂ ಧೂಳು ಕೊಡವಿ ಸಜ್ಜು ಮಾಡುತ್ತಿದ್ದನು. ''ಏನೋ ರಾಮು, ನಾಳೇದೇ ಹೊರಡುವಿಯೇನು ಹಾಗಾದರೆ?" ಎನ್ನುತ್ತಾ ಸತ್ಯ ಕೋಣೆಯನ್ನು ಹೊಕ್ಕ.

''ಓ, ಬಾರಯ್ಯಾ ಸತ್ಯ. ಏನು ಬಹಳ ಅಪರೂಪವಾಗಿಬಿಟ್ಟೆಯಲ್ಲಾ ಇತ್ತೀಚೆಗೆ"

''ನನ್ನದೇನೋ ಅಪರೂಪ. ನಿನ್ನ ಸಂಭ್ರಮದಲ್ಲಿ ನಾವೆಲ್ಲಾ ಎಲ್ಲಿ ಕಣ್ಣಿಗೆ ಬೀಳಬೇಕು" ಎಂದು ಒಂದು ವಕ್ರ ನಗೆ ನಕ್ಕ. ರಾಮುನಿಗೂ ತಕ್ಷಣ ಅರಿವಾಯಿತು ಮಾತಿನ ವೈಖರಿ. ಮಾತನ್ನೇ ಹೊರಳಿಸಿದ.

''ಮನೆಯಿಂದ ಏನಾದರೂ ಪತ್ರ ಬಂತೇನು?"

''ಯಾರೋ ಬರೀಬೇಕು ನನಗೆ?"

''ಎಲೇ ಇವನ. ಯಾರು ಬರೀಬೇಕಂತೆ! ಬಂದಿಲ್ಲೇನೋ ಏನೂ ನಾವು ನೋಡಿದೇವೆ ರಿಜಿಸ್ಟರ್ಡ್ ಕಾಗದ ನಿನ್ನೆ. ಹೋಡೀ ತಾನೇ ಸುಳ್ಳು. ಮಾಡಯ್ಯಾ ಮಜಾ ಮಾಡೋ"

"ಮಜಾ ಎಂಥದೋ ಬಂತು ಆದರಲ್ಲಿ. ಹೆಂಡತಿ ಗಂಡನ್ಗೆ ಕಾಗದ ಬರೆಯೋದೂ ಒಂದು ಮಜಾನೇನು. ಅದರಲ್ಲೇನಿದೆ ವಿಶೇಷ"

"ಮುಚ್ಚಿ ಬಿಡಪ್ಪಾ, ಸಾಕು ನಿನ್ನ ವೇದಾಂತ!"

"ಲೋ,ನಿಮ್ಗಾಗೇನೋ,ಸಿಕ್ಕ ಸಿಕ್ಕೋರ್ಗೆ ಪ್ರೇಮ ಪತ್ರ ಬರೆಯೋದು.

ನಾವು ಬ್ರಹ್ಮಚಾರಿಗಳು ಆಗಿರ್ತೇವೆ ಅಂತಾ ಕೂಗೋದು."

"ನಿಮ್ಹಾಗೆ ಗೊಡ್ಡು ಆಗಿರ್ಬೇಕೇನು? ಇದು ಪ್ರೇಮ ವಿವಾಹದ ಕಾಲ"

"ಅಂಥಾ ಪವಿತ್ರ ಪದಕ್ಕೆ ಯಾತಕ್ಕೆ ನಿಮ್ಮ ದುಷ್ಪ್ರವೃತ್ತಿ ಸೇರಿಸ್ತೀರಿ. ಪ್ರೇಮಕ್ಕಲ್ಲ ಮದುವೆ ಕಾಮಕ್ಕೆ ಅಂತಾ ಹೇಳ್ಕೊಳ್ಳಿ. ಅದನ್ಮುಚ್ಚೋಕೆ ಇಷ್ಟೆಲ್ಲಾ ಅವಾಂತರ.'' ಸತ್ಯನ ಮುಖ ಕೆಂಪೇರಿ ಗಂಭೀರವಾಯಿತು.

"ಮತ್ತೆ ನಿಮ್ಮ ಹಾಗೆ ಕಂಡೂ ಕಾಣದ ಕೊಂಪೆ ಹುಡುಗೀನ ಗಂಟು ಹಾಕ್ಕೋಳೋವಷ್ಟು ನಮ್ಗೆ ಹುಚ್ಚು ಹಿಡಿದಿಲ್ಲ ಇನ್ನೂ''

"ಅಥವಾ ನಿಮ್ಮಂತೆ ಕಂಡೂ ಕಂಡೂ ಪಟ್ಟಣದ ಹುಡುಗೀರ್ನ ಮದುವೆ ಮಾಡ್ಕೊಂಡು ಅವರಂತೆ ಕುಣಿಯಲು ತಲೆ ತಿರುಗಿಲ್ಲ ನಮ್ಗೆ. ಅಂಥಾ ವಿವಾಹ ಎಷ್ಟಯ್ಯಾ ಯಶಸ್ವಿ ಆಗಿರೋದು.''

"ಆ ಯಶಸ್ಸು ನಡೆಸಿಕೊಳ್ಳೋದ್ರಲ್ಲಿ ಇದೆ. ಅಷ್ಟೆ"

"ಅವರೆಂದಂತೆ ಕುಣಿದರೆ ಆ ರಾಣೀರ್ನ ಹೊಂದಿಸ್ಕೊಳ್ಳೋಕೆ ಸಾಧ್ಯ"

"ನೀವು ನೋಡಿ 12 ವರ್ಷದ ಕೂಸುಗಳ್ನ ಮದುವೆ ಮಾಡಿಕೊಂಡು ಗೋಳಾಡ್ಸ್ತೀರಿ."

"ಇಲ್ಲ, ೩೦ ವರ್ಷದ ಅಜ್ಜಿಯರ್ನ ಕಟ್ಕೊಂಡು ಬಾಳ್ವೆ ಮಾಡಿ ನೋಡೋಣ. ಬಾಲ್ಯ ವಿವಾಹ ಎತ್ತಿ ಹಾಕೋಕೆ ಪ್ರಯತ್ನ ಪಟ್ಟರೆ ಸರೀ ಅನ್ನು. ಅದನ್ನು ಬಿಟ್ಟು ಅಡ್ಡದಾರಿ ತುಳಿದು ಅಡ್ಡಗಾಲು ಹಾಕಬೇಕೇನು ?

"ಆದ್ರೆ ಮೊದಲೇ ಪ್ರೇಮವಿದ್ದರೆ ಆ ಮೇಲೆ ಸಂಸಾರ ಹೂಡಿದ್ರೆ ಎಲ್ಲಾ ಸರಿಯಾಗಿ ಹೊಂದಿ ಬಿಡುತ್ತೆ."

"ಸರಿ. ಸರಿ. ನಮ್ಮ ಮದುವೆಯಲ್ಲೂ ಪ್ರೇಮ ಇದೆ."

"ಮದುವೆಯಲ್ಲಿ ಆಗೋ ವೆಚ್ಚ ನಿಲ್ಲಿಸಬೇಕಲ್ಲವೇ?''

"ಹೌದು. ನೀವೇ ವರದಕ್ಷಿಣೆ ಕೇಳ್ತೀರಾ, ದುವ್ರ್ಯಯ ಬೇಡಾ ಅಯ್ಯೋ. ಯಾರನ್ನ ನೀವು ಟೀಕೆ ಮಾಡೋದು''

"ಸಮಾಜ"

"ಸಮಾಜ ಅಂದರೆ ಯಾರೂ ಅಂತ; ಪುರೋಹಿತ, ಅರ್ಚಕರಲ್ಲವೋ, ನಾನು ನೀನು ಮತ್ತೊಬ್ಬ. ನಾಲ್ಕು ಜನ ಸೇರಿ ಸರಿಯಾಗಿ ಅಂಥಾ ಕೆಲಸ ಮಾಡಿ ತೋರಿಸಿದರೆ ಎಲ್ಲರೂ ಒಪ್ಪಿಯಾರು. ನಾನು ಒಂದೇ ದಿನ

ದಲ್ಲೀ ಮದುವೆ ಮುಗಿಸಿದ್ದಕ್ಕೆ ನೀವೇ ಅಲ್ಲವೇನು ಆಕ್ಷೇಪ ತೆಗೆದು ಗಲಾಟೆ ಮಾಡಿದವರು ? ಗೊತ್ತು ಕಾಣೋ ನೀವೆಲ್ಲಾ ಬರೀ ಮಾತುಗಾರರು ಅನ್ನೋದು."

''ನಿನ್ನ ಮದುವೆಯಾಗಿದೆ ಅಂತ ಮಾತನಾಡ ಬೇಡವೊ ಸತ್ಯ. ನಿಜ ವಾಗಿ ಹೇಳೋ ನಿನಗೆ ಆ ಪದ್ಧತಿ ಒಪ್ಗೆಯೇನು?'' ಎಂದು ರಾಮು ನಕ್ಕ. ಸತ್ಯ ಮತ್ತಷ್ಟೂ ಗಂಭೀರವಾದ ಧ್ವನಿಯಿಂದ ನುಡಿದ.

"ಹಿಂದಿನ ಪದ್ಧತಿ ಒಪ್ಗೆ ಇಲ್ಲದಿದ್ದರೂ, ಅವನ್ನ ಈಗಿನ ಕಾಲಕ್ಕೆ ಸುಧಾರಣೆ ಮಾಡಿ ಹೊಂದಿಸಿಕೊಳ್ಳಬೇಕು ಅಷ್ಟೆ. ಪಾಶ್ಚಾತ್ಯರ ಅಂಧಾನು ಕರಣದಿಂದಲ್ಲ." ಇಬ್ಬರೂ ಸ್ವಲ್ಪ ಹೊತ್ತು ನಿಶ್ಶಬ್ದರಾದರು. ಸತ್ಯನೇ ಮತ್ತೆ ನುಡಿದ. ಧ್ವನಿಯೇ ಬದಲಾಯಿಸಿತ್ತು ಈಗ. "ರಾಮು, ನಾನು ಸಣ್ಣವ ಆದರೂ ನನ್ನ ಸಲಹೆ ತಗೋ. ಕಂಡೂ ಕಂಡೂ ಯಾವ ಆಸೆಗೂ ಬಲಿ ಬೀಳ ಬೇಡ. ಜೀವನ್ಮರಣವಾದೀತು."ಎಂದು ಸತ್ಯ ಸೌಮ್ಯನಾದ. ನಿಜವಾಗಿಯೂ ಅವನು ಅರ್ಥಪೂರ್ಣವಾಗಿ ನುಡಿದಿದ್ದರಿಂದ ರಾಮುನಿಗೂ ಸ್ವಲ್ಪ ತಲೆಗೆ ತಾಕಿತು. ಆದರೂ ಕಿವಿಗೆ ಬೀಳದವನಂತೆ ದುಪ್ಪಟಿಯನ್ನೊಮ್ಮೆ ಬಲವಾಗಿ ಝಾಡಿಸಿ ಮಡಿಸಿಟ್ಟನು. "ಸಾಕು ನಿನ್ನ ಮಾತು'' ಎಂಬ ಅರ್ಥವಿತ್ತು ಅದರಲ್ಲಿ.

"ಅದು ಸರಿ. ನಡಿ ಊಟಕ್ಕೆ ಹೋಗೋಣ. ಇನ್ನು ನಾನೆಲ್ಲೋ. ನೀನೆಲ್ಲೋ" ಎಂದು ಕರವಸ್ತ್ರ ಹುಡುಕಲನುವಾದನು.

"ಹಾಗೆನ್ನ ಬೇಡ ರಾಮು. ಎಲ್ಲಾ ಕಾಲಕ್ಕೂ ಇರಲಿ ನಮ್ಮ ಸ್ನೇಹ ಸಮಯಕ್ಕೆ ಸ್ನೇಹಿತ ಒದಗಿಯಾನೇ ಹೊರತು ನಿನ್ನ ಹಣವೂ ಕೂಡಾ ಬರ ಲಾರದು.ಏನೇನು ಪರಿಸ್ಥಿತಿ ಒದಗುತ್ತದೋ? ಹೇಗೇಗೋ"ಸತ್ಯನೆಂದ ಅದೇ ವಾಣಿಯಿಂದ. ಹಲ್ಲಿಯೊಮ್ಮೆ ಲೊಚಗುಟ್ಟಿತು. ಸತ್ಯ ಒಮ್ಮೆ ಕನಸು ಕಂಡವನಂತೆ ಛಟ್ಟನೆ ತಲೆಯೆತ್ತಿನೋಡಿ ಹೊರನಡೆದ. ರಾಮನೂ ಬೇಗ ಹಾಕಿ ಅವನನ್ನು ಹಿಂಬಾಲಿಸಿದ.

ಸತ್ಯನಿಗೆ ಊಟದ ಮೇಲೆ ಹೆಚ್ಚು ಪರಿವೆಯಿರಲಿಲ್ಲ. ತಲೆ ಬಗ್ಗಿಸಿ ಕೊಂಡು ಸುಮ್ಮನೆ ಊಟಮಾಡುತ್ತಿದ್ದ. ನಿಜವಾಗಿಯೂ ಕೆಲವೊಂದು ವಿಷ

ಯುಗಳ ಮೇಲೆ ಅವನ ಹಿಡಿತ ಹೆಚ್ಚು. ಮನಸ್ಸಿಗೆ ಬಿದ್ದಿತೆಂದರೆ ಅದರ ನೆಲೆ ಗಾಣುವವರೆಗೂ ಅರಸುತ್ತಿದ್ದ. ಹುಡುಗರ ಕೂಗಾಟ, ಧಾಂದಲೆ, ನಗುವಿನ ಅಲೆಗಳು ಯಾವರೀತಿಯಲ್ಲೂ ಅವನ ಮನಸ್ಸನ್ನು ಹರಿಸಲಿಲ್ಲ. ರಾಮುನ ನುಡಿಗಳನ್ನೇ ಮೆಲುಕು ಹಾಕುತ್ತಿದ್ದಿರ ಬೇಕು. ಅವನೋ ಬೇರೊಂದು ಕಡೆ ಹಾಯಾಗಿ ಕುಳಿತು ಊಟ ಮಾಡುತ್ತಾ ಹರಟೆ ಹೊಡೆಯುತ್ತಿದ್ದ. "ಇದು ರಾಮುನಂಥವರದೇ ಯುಗ. ನಾನೊಬ್ಬನೇ ಏನು ಮಾಡಬಲ್ಲೆ. ಆದರೂ ಇನ್ನುಳಿದವರನ್ನು ಕಟ್ಟಿಕೊಂಡು ನನಗೇನಾಗಬೇಕು ? ರಾಮು ನನ್ನ ಪರಿಚಯದವನೆಂದೇ ನನಗಷ್ಟು ವಿಶ್ವಾಸ. ಅಷ್ಟೇ ಈ ಮನೋವ್ಯಥೆಗೆ ಕಾರಣ ಮುಂತಾಗಿ ಏನೇನೋ ಗುಣಾಕಾರ ಹಾಕುತ್ತಿದ್ದ. ಜಯರಾಮನು ನಡೆಯುತ್ತಿರುವ ಹಾದಿ ಅವನ ಕೇಡಿಗೆ ಕಾರಣವಾದೀತೆಂದು ಅವನಿಗೆ ಭಯವುತ್ಪನ್ನವಾಗಿತ್ತು. ರಾಮುನ ಈ ವರ್ತನೆಯ ಮೇಲೆಯೂ, ಅಲ್ಲಿಂದ ಇಲ್ಲಿಂದ ಬರುವ ಗಾಳಿ ವರ್ತಮಾನಗಳಿಂದಲೂ, ಸತ್ಯನ ಮನಸ್ಸು ವ್ಯಾಕುಲವಾಯಿತು. ಅದನ್ನೇ ಮಾತನಾಡಲು ಇಂದು ಅವನು ಕೋಣೆಗೆ ಬಂದಿದ್ದನು. ಆದರೆ ಯಾವುದೋ ಎಲ್ಲಿಯದೋ ಮಾತು ಬಂದು ವಿಚಾರವೇ ಹಾರಿ ಹೋಯಿತು.ಆಯಿತು.ನಾನಿರುವ ವರೆಗೂ ಅವನಿಗೆ ಹೇಳುತ್ತಿರುವುದೇ ನನ್ನ ಕೆಲಸ. ಮುಂದೇನೋ ನೋಡುವ, ದೇವರಿದ್ದಾನೆ. ಹೀಗೆ ವಿಚಾರ ಮಂಥನಗಳ ಮಡುವಿನಲ್ಲಿ ಊಟಮುಗಿಸಿ ಹಾಯಾಗಿ ಕೋಣೆಗೆ ಹೋಗಿ ಒರಗಿದ. ಬಾದಾಮಿ ಹಾಲು ಖೀರಿನ ಊಟದ ಸೊಂಪಿನಿಂದ ಒಳ್ಳೆಯ ಜೊಂಪೇರಿ ನಿದ್ದೆ ಬಂದಿತು. ಪಾಪ ಸಮುದ್ರಕ್ಕೆ ಹೋದರೂ ಮೊಳಕಾಲುದ್ದ ನೀರು ಎಂಬಂತೆ, ಆತನಿಗೆ ಮಲಗಿದರೂ ಚಿಂತೆ ತಪ್ಪದಾಯಿತು. ಸತ್ಯನಿಗೆ ಅಂದೇ ರಾತ್ರಿ ಸ್ವಪ್ನ ಬಿದ್ದಿತು. ಸತ್ಯ ಜಯರಾಮ ಇಬ್ಬರೂ ಒಂದು ಸರೋವರದ ದಂಡೆಯಲ್ಲಿ ನಿಂತಿದ್ದಾರೆ. ಸೂರ್ಯಾಸ್ತಮದ ಸಮಯ. ಚಿತ್ರವಿಚಿತ್ರಗತಿಯಿಂದ ಬಣ್ಣಗಳು ಬದಲಾಯಿಸುತ್ತಾ ನಡೆದಿವೆ. ಸರೋವರದ ನೀರು ಗಂಭೀರದಿಂದ ಸುಮ್ಮಾನವಾಗಿ ನಿಂತಿತ್ತು. ಅಲ್ಲಲ್ಲಿ ಕಮಲಗಳು. ಭಾಸ್ಕರನು ಮರೆಯಾಗುವುದರೊಡನೆ ಕಣ್ಣು ಮುಚ್ಚಲನುವಾಗುತ್ತಿವೆ.

"ಸತ್ಯ, ಎಷ್ಟು ಚಲೋ ಇದೆಯೋ ಅದು ಕಮಲ. ತರುತ್ತೇನೆ ನಿಲ್ಲು"

"ಚೆಂದವಿದ್ದೀತು ಬಿಡೋ ಮಹಾ. ಎಂದೂ ಇಲ್ಲದ್ದು ಎಲ್ಲೂ ಇಲ್ಲದ್ದು

ಅನ್ನುವಂತೆ ಮಾಡುತ್ತೀಯಲ್ಲ. ಹುಚ್ಚು ಹುಡುಗ"

"ತರುತ್ತೇನೆ ಸ್ವಲ್ಪ ನಿಲ್ಲು. ಇಲ್ಲೇ ದಂಡೆಯಲ್ಲಿದೆ."

"ಬೇಡವೋ ಮಬ್ಬುಗತ್ತಲೆಯ ಸಮಯ. ನಾಳೆ ತಂದರಾಯಿತು." ಎಂದು ಸತ್ಯ ಎನ್ನುವಷ್ಟರಲ್ಲಿಯೇ ರಾಮನಾಗಲೇ ನೀರಲ್ಲಿ ಇಳಿದು ಬಿಟ್ಟಿದ್ದ. ಏನಾಯಿತೋ ಏನೋ ಒಮ್ಮೆಲೇ ಕಮಲವನ್ನು ಹಿಡಿದವನೇ ಕಾಲು ಜಾರಿ "ಸತ್ಯಾ" ಎಂದು ಕೆಟ್ಟಧ್ವನಿಯಲ್ಲಿ ಒದರುತ್ತಾ ನೀರಲ್ಲಿ ಮುಳುಗಿ ಎದ್ದ. "ಏ, ರಾಮೂ, ಬಂದೆ" ಎನ್ನುತ್ತಾ ಸತ್ಯನೂ ನೀರಲ್ಲಿ ಜಿಗಿದ. ಸತ್ಯನಿಗೆ ಅಷ್ಟರಲ್ಲಿಯೇ ಎಚ್ಚರವಾಯಿತು. ಇನ್ನೂ ಎದೆ ಬಡೆಯುತ್ತಿತ್ತು. ಮೈ ಬೆವರಿತ್ತು. "ಹ್ಞು, ಮೈ ಚೆನ್ನಾಗಿಲ್ಲ." ಎಂದು ತನ್ನಲ್ಲೇ ತಾನು ಗೊಣಗಿಕೊಂಡು ಎದ್ದ. ಗಡಿಯಾರ ನೋಡಿದಾಗ ನಾಲ್ಕು ಬಡೆದಿತ್ತು. ಸತ್ಯ ಮುಖ ತೊಳೆಯಲು ಎದ್ದು ಹೋದ.

ಅಂದಿನ ಸಂಜೆಯೇ ಜಯರಾಮ ವಿಜಯನ ಮನೆಗೆ ಹೋದ. ವಿಜಯ ಮಂಜು ಇಬ್ಬರೂ ರಾಯರೊಡನೆ ಮಾತನಾಡುತ್ತಾ ಕುಳಿತಿದ್ದರು. ರಾಯರು ಆರಾಮವಾಗಿ ಪಲ್ಲಂಗಕ್ಕೆ ಒರಗಿದ್ದರು. ರಾಮನಿಗೇನೋ ವಿಚಿತ್ರವೆನಿಸಿತು. ತಂದೆ ಮಕ್ಕಳು ಎಂದೂ ಹೀಗೆ ಗುಟ್ಟಾಗಿ ಮಾತನಾಡಿದ್ದುದನ್ನು ಕಂಡಿರಲಿಲ್ಲ. ಆದರೂ ಧೈರ್ಯಮಾಡಿ "ನಮಸ್ತೆ" ಎಂದು ಕೈಮುಗಿಯುತ್ತಾ ಒಳಕ್ಕೆ ನುಗ್ಗಿಯೇ ಬಿಟ್ಟ.

"ಓ, ಬನ್ನಿ, ಬನ್ನಿ" ಎಂದು ರಾಯರೂ ಉಪಚಾರೋಕ್ತಿಯಿಂದ ನೇರವಾಗಿ ಪಲ್ಲಂಗಕ್ಕೆ ಒರಗಿ ಕುಳಿತರು. "ರಾತ್ರಿಯೇನು ಹೊರಡುವುದು ಊರುಕಡೆ" ಎಂದು ಕೇಳಿದರು.

"ಹೌದು"

"ಜೊತೆಯಲ್ಲಿ ಯಾರಾದರೂ ಬರುತ್ತಾರೇನು ?"

"ಯಾರೂ ಇದ್ದಂತಿಲ್ಲ"

"ಮತ್ತೆ ನಿಮ್ಮದೇನು ಇಷ್ಟು ಅವಸರ ?"

"ಅವಸರವೇನು ? ಇಷ್ಟರಲ್ಲೇ ಮನೆಯಲ್ಲಿ ರಾದ್ಧಾಂತವಾಗಿದ್ದೀತು. ಕಾಗದ ಕೂಡಾ ಬರೆದಿಲ್ಲ. ಅವರನ್ನೆಲ್ಲಾ ಚಿಂತೆಯಲ್ಲಿ ಇಟ್ಟಿರೋದು ಚೆನ್ನಾ

ಗಿರೊಲ್ಲ ಅಷ್ಟೇನೆ. ಅದಕ್ಕೇನೆ ಆತುರವಾಗಿ ಹೊರಟು ನಿಂತು ಬಿಟ್ಟಿ"

''ಅದುಸರಿ. ನಮ್ಮಮಂಜುವಿನ ವಿಚಾರ ಮಾತಾಡಲೇ ಇಲ್ಲವಲ್ಲ''

ರಾಮು ಅವಾಕ್ಕಾದ. ಇಷ್ಟು ನೇರವಾಗಿ ಪ್ರಶ್ನೆಬಿದ್ದೀತೆಂದು ಅವನು ನಂಬಿರಲಿಲ್ಲ. ತಕ್ಷಣ ಉತ್ತರ ಕೊಡುವುದೇ ಕಠಿನವಾಯಿತು. ಗಂಟಲಲ್ಲಿ ಉಸಿರು ಸಿಕ್ಕಿದಂತಾಯ್ತು.

'"ನನ್ನ ಮೇಲೆ ಏನಿದೆ ಸಾರ್. ಎಲ್ಲಾ ಮನೆಯವರದೇ'' ಎಂದು ಗದ್ಗದಿತನಾಗಿ ನುಡಿದ.

"ಅಯ್ಯೋ, ನಿಮ್ಮ ಮುಂದೆ ಮತ್ತೇನಿದ್ದೀತು. ನಮಗೆ ಒಬ್ಬಳೇ ಮಗಳು. ನೀಲಗಿರಿ ಕಾಫೀ ತೋಟ ಅವಳ ಹೆಸರಿಗೇ ಇದೆ. ನಮ್ಮ ವಿಜಯನೂ ಇಷ್ಟರಲ್ಲೇ ಇಂಗ್ಲಂಡಿಗೆ ಹೋದಾನು. ಕಿತ್ತಲೆ, ಯಾಲಕ್ಕಿ, ಮೆಣಸು ಪ್ಲಾಂಟೇ ಷನ್ ಎಲ್ಲಾ ಅವನ ಬಾಬ್ತು. ನನ್ನದೇನುಳಿದಿವೆ, ನಮ್ಮ ಮಂಜು ವಿನ ಮದುವೆಯೊಂದನ್ನು ಬಿಟ್ಟು.'' ಎಂದರು. ರಾಮನಿಗೆ ಮತ್ತೆ ಬಾಯಿ ಕಟ್ಟಿತು. ಏನು ಮಾತಾಡಬೇಕೆಂಬುದೇ ಅವನಿಗೆ ಸಮಸ್ಯೆ ಬಿದ್ದಿತು. "ನೋಡುವ ಸಾರ್, ಈಗಲೇ ಏಕೆ ಅಷ್ಟು ಅವಸರ. ನೀವೂ ತಿಳಿದವರಿದ್ದೀರಿ. ಎಲ್ಲಾ ವಿಚಾರವೂ ನಡೆಯಲಿ. ಆ ಮೇಲೆ ಮುಂದಿನ ಮಾತು." ಎಂದನು.

"ಅದೆಲ್ಲಾ ಸರಿ, ನಿಮ್ಮ ಒಪ್ಪಿಗೆ ಇದ್ದಿತೆಂದರೆ ನನಗೂ ಸ್ವಲ್ಪ ಸಮಾಧಾನ."

"ನನಗೆ ಆ ಜವಾಬ್ದಾರಿ ಬೇಡಾ ಸಾರ್"

"ಆಯಿತು. ನೀವು ಹೋಗಿ ವಿಚಾರ ಮಾಡಿದ ನಂತರವೇ ಬರೆಯಿರಿ. ಆಧುನಿಕ ದಾಂಪತ್ಯವೇ ಆಗುತ್ತೆ. ಉಳಿದದ್ದೆಲ್ಲಾ ಸರಾಗ" ಎಂದು ಮಾತಿಗೆ ಬ್ರೇಕ್ ಹಾಕಿ, "ಮಂಜೂ ಟೀ ತಯಾರಿದೆಯೇನು'' ಎಂದು ಕೂಗಿದರು. "ಏನೂ ಬೇಡಾ ಸಾರ್. ಊಟ ಕೂಡಾ ಭಾರವಾಗಿದೆ"ಎಂದು ರಾಮ ನುಡಿಯುವಷ್ಟರಲ್ಲೇ ಯಕ್ಷಿಣೀ ವಿದ್ಯೆಯ ಆರಂಭವಾಯಿತು. ಮಂಜು ಒಯ್ಯಾರದಿಂದ ಟೀಯನ್ನು ತಂದುಕೊಟ್ಟಳು. ಜಯರಾಮ ಮಾತ್ರ ಮುಖ ಎತ್ತಿ ಕೂಡಾ ನೋಡದೆ ಟೀ ಎಳೆದು ಬಿಟ್ಟ. ಇಲ್ಲಿಯ ವರೆಗೆ ಇದ್ದರೂ ಇಲ್ಲದವ ನಂತಿದ್ದ ವಿಜಯನೂ ನಗುತ್ತಾ ಎಂದ.

"ನಾನು ಇಂಗ್ಲಂಡಿಗೆ ಹೋಗುವುದಕ್ಕೆ ಮುಂಚೆಯೇ ಆಗಿ ಬಿಡ

ಬೇಕಪ್ಪಾ ಎಲ್ಲಾನೂ.''

"ಹ್ಞೂ, ಸಾಕು ಬಿಟ್ಟು ಬಿಡಿ. ಆ ವಿಚಾರನ. ಗಾಳಿ ಸವಾರಿಗೆ ಬರ್ತೀರೋ ''

"ಓಹೋ'' ಎಂದು ಕುರ್ಚಿಗೆ ಹಾಕಿದ್ದ ಕೋಟನ್ನು ಏರಿಸಿ ನಿಂತ. ಜಯರಾಮ ಮತ್ತೊಮ್ಮೆ ರಾಯರಿಗೆ ಕೈಮುಗಿದು ಹೊರಬಿದ್ದ. ಕೋಣೆಯ ಪರದೆಯ ಹಿಂದಿನಿಂದ ಎರಡೇ ಎರಡು ಚಂಚಲವಾದ ಕಣ್ಣುಗಳು ಕಂಡವು. ರಾಮುನಿಗೆ ಮತ್ತೊಮ್ಮೆ ಪುಲಕ! ವಿಜಯ ನೂಕಿಕೊಂಡು ಹೋಗದಿದ್ದರೆ ಮತ್ತೆ ಅಲ್ಲೇ ನಿಲ್ಲುತ್ತಿದ್ದನೇನೋ?

ರಾಮು ಗಾಡಿಯಲ್ಲಿ ಕುಳಿತು ಕಿಟಕಿಯ ಮೇಲೆ ಕೈಯೂರಿದ್ದ. ಕೆಳಗಡೆಯಿಂದ ವಿಜಯ ಮಾತನಾಡುತ್ತಿದ್ದ. ಸತ್ಯನು ಇಲ್ಲಿಯ ವರೆಗೂ ಅವನನ್ನೇ ಹುಡುಕುತ್ತಿದ್ದರೂ ಈಗ ಎದುರಿಗೆ ಅವನೇ ಕಂಡರೂ, ವಿಜಯನೊಡನೆ ಮಾತನಾಡುತ್ತಿದ್ದುದರಿಂದ ಮುಂದಕ್ಕೆ ಹೆಜ್ಜೆಯಿಡಲು ಮನಸ್ಸು ಬಾರದು.

ಆದರೆ ರಾಮನ ದೃಷ್ಟಿ ಹೇಗೋ ಅವನಿದ್ದ ಕಡೆಗೇ ಹರಿಯಿತು. "ಅರೇ ಸತ್ಯ, ಬಾರೋ ಅಲ್ಲಿಯಾಕೆ ನಿಂತೆ?" ಎಂದ.

ಸತ್ಯನು ಅಪರಾಧಿಯಂತೆ ಹುಸಿನಗೆ ನಕ್ಕು "ಓ, ಆಗಲೇ ಬಂದು ಗಾಡಿಯೇರಿಬಿಟ್ಟದ್ದೀಯಲ್ಲಾ. ನಾನು ಬಂದಿಲ್ಲ ಅಂತಾನೇ ತಿಳಿದಿದ್ದೆ" ಎಂದು ಮಾತು ನುಂಗಿಕೊಂಡು ಕೈಕುಲುಕಿದ. ಅಸಹನೆಯ ಸರದಿ ಈಗ ವಿಜಯನಿಗೆ ಬಂತು. "ಬಂದ್ಬಿಟ್ಟೆ ರಾಮೂ, ಇಲ್ಲೇ ಪಕ್ಕದ ಗಾಡಿಯಲ್ಲಿ ಕೇಶವ ಇದ್ದಾನೆ. ಹೇಳ್ಬಿಟ್ಟು ಬರ್ತೇನೆ"ಎಂದು ತಲೆಮರೆಸಿಕೊಂಡು ಹೋದ. ಪೀಡೆ ತೊಲಗಿತೆಂದು ಸತ್ಯ ನಿರಾಳವಾಗಿ ನುಡಿದ.

"ರಾಮೂ, ನಾನು ಹೇಳಿದ್ದೆಲ್ಲಾ ಚೆನ್ನಾಗಿ ಜ್ಞಾಪಕದಲ್ಲಿ ಇರಲಿ."

"ಹೋ. ಬಹಳ ಬುದ್ಧಿವಂತ ಕಾಣೋ ನೀನು. ನಿನ್ನ ಮಾತು ಕೇಳ್ದಿದ್ರೆ ಹ್ಯಾಗೆ"

"ಅದೆಲ್ಲಾ ಇರಲಿ,ಹೋದಕೂಡಲೇ ಇಲ್ಲಿನ ಅಡ್ರೆಸ್‌ಗೆ ಕಾಗದ ಬರಿ. ಅಲ್ಲಿಂದ ನಾನು ಊರಿಗೆ ಹೋಗಿ ಅಲ್ಲಿಯ ಅಡ್ರೆಸ್ ಕೊಡ್ತೇನೆ.'' ರೈಲು ಸಿಳ್ಳು ಹಾಕಿತು. ಸತ್ಯನಿಗೆ ಕರುಳು ಹಿಂಡಿದಂತಾಯ್ತು. ಕಣ್ಣು ತುಂಬ ನೀರು ತುಂಬಿ ಕಂಠದಿಂದ ಮಾತೇ ಹೊರಡಲಾರವು. ರಾಮನಿಗೂ ಸ್ವಲ್ಪ

ಮುಖದ ಬಣ್ಣ ಕುಂದಿತು. ರೈಲು ನಿಧಾನವಾಗಿ ಚಲಿಸಿತು. ವಿಜಯನೂ ಓಡುತ್ತಾಬಂದು "ಥರ್ಮೋಸ್"ತಂದುಕೊಟ್ಟ. ರಾಮು ಕರವಸ್ತ್ರ ಬೀಸುತ್ತಾ ಮುಂದರಿದ. ಸತ್ಯನಿಗೆ ಕಣ್ಣಲ್ಲಿ ನೀರು ತುಂಬಿ ಬಂದಿದ್ದರಿಂದ ರಾಮನ ಮಂಜು ಮಂಜಾಗಿ ಕಾಣುತ್ತಿದ್ದ ಚಿತ್ರ ಮರೆಯಾಯಿತು; ಆ ಗಾಢಾಂಧಕಾರದಲ್ಲಿ ಸತ್ಯ ಕಣ್ಣೊರಸಿಕೊಂಡು ನಿಲ್ದಾಣದಿಂದ ಹೊರಬಿದ್ದ.ಆದರೆ ಏನೋ ಶೂನ್ಯತೆಯಾವರಿಸಿತ್ತು ಅವನ ಮನಸ್ಸಿನಲ್ಲಿ.ಎದೆಯಲ್ಲಿ ದುಗುಡ. ಸುಮ್ಮನೇ ಹಾಸಿಗೆಯಲ್ಲೇ ಹೊರಳಿದ.

ಅಂದು ನಾರಾಯಣರಾಯರ ಮನೆಯಲ್ಲಿ ಸಂಭ್ರಮ.ಆದರೆ ದಾಯಾದಿಗಳಿಗೆ ಕಣ್ಣೊತ್ತು. ಮನೆಯ ಹೆಂಗಸರಂತೂ ಲಟಿಕೆಯನ್ನೇ ಮುರಿದ್ಬುಬಿಟ್ಟರು, ರಾಮನ ಅಭ್ಯುದಯ ನೋಡಿ!

"ನೋಡಿದಿರಾ, ಸುಮ್ಮ ಸುಮ್ಮನೆ ಮನೆ ತುಂಬಾ ಹಾರಾಡಿಬಿಟ್ಟರಿ, ಎಲ್ಲಿ ಓಡಿ ಹೋದನೋ ಅಂತ" ಎಂದು ಶಂಕರಮ್ಮ ನಗುತ್ತಾ ಟೀಕಿಸಿದಳು.

" ಸಾಕು ಸುಮ್ಮನಿರೀ, ಹಿಂದಿನದೆಲ್ಲಾ ಮತ್ತೆ ಯಾಕೆ?" ಎಂದು ರಾಯರೂ ಗದರಿದರು. ಬೇಕಾದ ಕೆಲವು ಜನಗಳಿಗೆ ಅಂದು ರಾಯರ ಮನೆಯಲ್ಲಿ ಊಟದ ಏರ್ಪಾಡು ನಡೆದಿತ್ತು. ರಾಮನೂ ಕೂಡಾ ಉಲ್ಲಾಸವಾಗಿ ಎಲ್ಲರೊಡನೆಯೂ ಮಾತನಾಡುತ್ತಿದ್ದ. ಇದೇ ವೇಳೆಯುಲ್ಲಿಯೇ ರಾಜಾರಾಯರ ಸೂಚನೆಯನ್ನು ಎತ್ತಿಬಿಡಲೇ ಎಂಬ ವಿಚಾರ ತಲೆಯಲ್ಲಿ ಸುಳಿಯಿತು. ಆದರೆ ಅವನಿಗೇ ಭಯ. ನಾನಾಗಿಯೇ ವಿಷಯವನ್ನು ಎತ್ತುವದು ಸರಿಯಾಗಲಾರದು ಎಂದು ಸುಮ್ಮನಾದ. ಈಗ ಅದಕ್ಕಿಂತ ಮುಂಚೆ ತಾನು ಕೈಗೊಳ್ಳುವ ಕಾರ್ಯವೇ ನಿರ್ಧಾರವಾಗಿರುವಾಗ ಇನ್ನುಳಿದ ವಿಷಯಗಳು ಬೇಡ ಎಂದು ತನ್ನಲ್ಲಿ ತಾನೇ ಲೆಕ್ಕಹಾಕಿ ಸುಮ್ಮನಿದ್ದುಬಿಟ್ಟ. ಎಲ್ಲರೂ ಹೊರಪಡಸಾಲೆಯಲ್ಲಿ ಕುಳಿತಿದ್ದರು. ಎಲ್ಲರೂ ನಾರಾಯಣರಾಯರ ಹಳೆಯ ಸ್ನೇಹಿತರೇ. ರಾಮನನ್ನು ಚಿಕ್ಕಂದಿನಿಂದ ಬಲ್ಲವರೇ ಇದ್ದರು. ಹರಟೆಗೇನು ಬುಡಮೇಲುಗಳು ಇಲ್ಲವೇ ಇಲ್ಲವಲ್ಲ. ಅವರ ಮಾತುಗಳು ಆಕಾಶ ಭೂಮಿಯ ಮಧ್ಯೆ ಇರುವ ಸರ್ವವಸ್ತುಗಳ ಮೇಲೆಯೂ ಹರಿಹಾಯ್ದವು. ಲಕ್ಷ್ಮಣರಾಯರಂತೂ ರಾಮನ್ ತತ್ವ, ಅಯನ್‌ಸ್ಟಿನನ ಸಿದ್ಧಾಂತ, ಇಂಥದ್ದರ ಮೇಲೆ

ಮಾತನಾಡಿದರು. ಯಾರಿಗೂ ಅರ್ಥವಾಗದೆಂದ ಮೇಲೆ ಮಾತಾಡಲು ಹೆದರಿಕೆಯೇನು ? ಅದೂ ಇದೂ ಮಾತನಾಡುತ್ತಾ ಕೊನೆಗೆ "ಮತ್ತೇನು ರಾಮು, ಇಲ್ಲಿಯೇ ದವಾಖಾನೆ ಆರಂಭಿಸೋದು ತಾನೇ ?'' ಎಂದರು.

"ಎಲ್ಲಾ ನಮ್ಮ ತಂದೆ ಮೇಲೆ ಇದೆಯಷ್ಟೆ'' ಅವನೆಂದ. ಅಷ್ಟರಲ್ಲಿ ರಾಯರೂ ಹೊರಕ್ಕೆ ಬಂದರು. ಲಕ್ಷ್ಮಣರಾಯರು ಸುಮ್ಮನಿರಲಾರದೆ "ಏನೋ ರಾಮು ಇಲ್ಲೇ ದವಾಖಾನೆ ಹಾಕ್ಬಿಡ್ತಾನಂತಲ್ಲೋ. ನಿನ್ನದೇನು ಯೋಚನೆ ಇದೆ?" ಎಂದರು. ರಾಯರಿಗೂ ಸ್ವಲ್ಪ ಕಷ್ಟಕ್ಕಿಟ್ಟಿತು.

"ನೋಡೋಣ ಬಿಡಪ್ಪ. ಅವನ ಮನಸ್ಸು ಬಂದ ಹಾಗೆ ಆಗಲಿ. ನನ್ನ ಭಾರವೊಂದು ಕಳೀತಲ್ಲ" ಎಂದು ನಕ್ಕು ಸುಮ್ಮನಾದರು. ಇಷ್ಟೊ ಹೊತ್ತು ಸುಮ್ಮನಿದ್ದ ಸುಂದರರಾಯರು:

"ಜಾಗ ಒಂದು ಬೇಕಲ್ಲೋ ಅಲ್ಲಿ. ಅದೇ ತಾನೆ ತೊಂದರೆ" ಎಂದು ಗೋಗರೆದರು.

"ಎಲ್ಲಾ ಆಗುತ್ತೆ" ಎಂದು ರಾಮನೂ ಧೈರ್ಯದಿಂದ ನುಡಿದ.

"ಹೂ, ಆಯಿತು. ನೋಡೋಣ. ಈಗ ಊಟಕ್ಕೇಳಿ ಎಲ್ಲರೂ" ಎಂದು ಗಡಿಬಿಡಿಯಿಂದ ಎಬ್ಬಿಸಿದರು. ಒಳಗಿನ ವ್ಯವಸ್ಥೆಯೆಲ್ಲಾ ರಾಜಾರಾಯನದು. ಅಡಿಗೆ ಪುಗ್ಗಲಮನೆ ಶೀನಪ್ಪನದು ಎಂದ ಮೇಲೆ ಹೇಳಬೇಕಾದ್ದೇನು ? ಊಟವೇನೋ ಸಾಂಗವಾಗಿ ನೆರವೇರಿತು. ನಂತರ ಮತ್ತೆ ಎಲ್ಲರೂ ಹೊರಸಾಲೆಗೆ ಬಂದರು. ಹರಟೆಯ ಹುಚ್ಚು ಹೊನಲು ಆರಂಭವಾಯಿತು. ಶಂಕರಮ್ಮನ ಪರಿಚಯದವರು ಬಾಗಿಲ ಕಂಡಿಯಿಂದ, ಕಿಟಕಿಯಿಂದ, ರಾಮನನ್ನು ಕದ್ದು ಕದ್ದು ನೋಡಿ ಪಿಸುಗುಟ್ಟುತ್ತಿದ್ದರು. ಯಾರ‍್ಯಾರ ದೃಷ್ಟಿಯಲ್ಲಿ ಏನೇನೋ ಆಗಿ ಕಂಡ ರಾಮ ಇತರ ಎಲ್ಲಾ ತರುಣರಂತೆ. ಬೊಂಬಾಯಿಯಲ್ಲಿದ್ದವನೆಂದು ಕೆಲವರು, ಮೋಟು ಜೊಣ್ಣ ಹಾಕಿ ತಿರುಗುತ್ತಿದ್ದ ಪುಢಾರಿ ಹೇಗಿದ್ದಾನೆಂದು ಎಂದು ಮತ್ತೊಬ್ಬರು, ಡಾಕ್ಟರ್ ಎಂದರೇ ಹೇಗಿರುತ್ತಾರೆ ಎಂದು ಮತ್ತಿಷ್ಟು ಜನ, ನಮಗೆ ಅಳಿಯನಾದರೆ ಹೇಗೆ? ಎಂದು ಹಂಬಲಿಸಿ ಹಣಕಿದವರು ಹಲವರು, ಹೀಗೇ ನೋಡಿ ನೋಡಿ ಮರೆಯಾದರು.

ನಾರಾಯಣರಾಯರು ಊಟ ಮುಗಿಸಿ ಎಲೆಯಡಿಕೆ ಅಗಿಯುತಾ

ಜಗುಲಿಯಮೇಲೆ ಕುಳಿತಿದ್ದರು. ಪೂರ್ಣ ಚಂದ್ರನ ಆಹ್ಲಾದಕರವಾದ ತುಂಬುನಗೆ ಕಟ್ಟೆಯನ್ನಾವರಿಸಿತ್ತು. ಶೀತಲವಾದ ಮರೀಚಿಕೆಯ ಉತ್ಪನ್ನ ದಿಂದುದಿಸಿದ ಶೀತಲ ಮಾರುತ ಸುಳಿಯುತ್ತಿತ್ತು. ಮರದ ಎಲೆಗಳು ತಮ್ಮೊಳಗೆ ತಾವೇ ಮಾತಾಡುತಿದ್ದುವು. ರಾತ್ರಿರಾಣಿ ಹೂವಿನ ಸುಗಂಧ ಹೇರಿಕೊಂಡು ಮಾರುತನು ಬರಲಾರದೆ ಬೀಸುತ್ತಿತ್ತು. ಶಂಕರಮ್ಮನೂ ಊಟ ಮುಗಿಸಿ ಬಂದು ಎಲೆಯಡಿಕೆ ಎದುರಿಗೆ ಕುಳಿತಳು. "ಥೂ, ಏನು ತಂಬಾಕು ಮುಕ್ಕುತ್ತಾರಪ್ಪಾ ಇವರು, ಕೆಟ್ಟವಾಸನೆ" ಎಂದು ಮುಖ ಕೆಡಿಸಿದಳು.

"ನಿನ್ನದೇನು ಬಹಳಾ ಒಳ್ಳೇ ಗುಣವೇ. ಕಾಚು ಒಗರುತಿನ್ನೋರ್ಗೆ ಏನುಗೊತ್ತು ತಂಬಾಕಿನ ರುಚಿ. ತಂಬಾಕು ವಾಸನೆಯಂತೆ!"

"ನಿಮ್ಮಹಾಗೆ ಮುಕ್ಕೋದಿಲ್ಲವಲ್ಲ"

"ಹೂ, ಸಾಕು ಬಿಡೇ ನಿನ್ನ ತಲೆಹರಟೆ. ಇಲ್ಲದೆಲ್ಲಾ ಕೆದರಿಕೊಂಡು ಬಂದು ಕೆಣಕುತ್ತಾಳೆ" ಎಂದು ತಮ್ಮ ವಾಗ್ಬಡತನವನ್ನು ಮುಚ್ಚಲೆತ್ನಿಸಿದರು.

"ಮಾತಾಡೋದೆ ಪ್ರಾಣ ಸಂಕಟ ಆಯ್ತಲ್ಲ ಇವರ್‍ಗೆ್ಹತೇಲಿ?"

"ಓ, ಷುರುವಾಯ್ತೋ ನಿನ್ನ ಗೀತಾಪಠನ. ಒಟ್ಟನಲ್ಲಿ ನೀನೆ ಏಕೆ ಬಂದಿದ್ದೀಯ ಅಂತ ಹೇಳಿಬಿಡು. ಯಾಕೆ ನಿನ್ನ ಬಾಯಲ್ಲಿ ಉಳಿಯಬೇಕು ಅದು" ಎಂದು ರಾಯರು ಮುಖ ಗಂಟು ಹಾಕಿದರು. ಶಂಕರಮ್ಮ ಸ್ವಲ್ಪ ಹೊತ್ತು ಸುಮ್ಮನಿದ್ದು ನುಡಿದಳು.

"ರಾಮು ಏನಂತಾನೆ ಮತ್ತೆ ?"

"ಯಾವುದಕ್ಕೆ ಏನಂತಾನೆ ?"

"ಇದೇನು ಮಾತುಗಾರಿಕೆ. ಯಾಕೆ ಹಾಗೆ ಮಾಡುತ್ತೀರಿ. ಮನಸ್ಸೆಲ್ಲೋ, ಮಾತೆಲ್ಲೋ. ಮಾತಾಡೋಲ್ಲ ಅಂತ ಹೇಳ್ಬಿಡಿ"

"ಹಾಗಲ್ಲವೇ. ಮದುವೆ ವಿಚಾರ ಎತ್ತಿದೆಯೇನೋ ಅಥವಾ ಅವನ ಕೆಲಸವೋ ಅಂತ ಕೇಳಿದೆ. ಅದಕ್ಕೇಕೆ ಇಷ್ಟು ಮಾತು." ಮತ್ತೆರಡು ಅಡಿಕೆ ಚೂರು ಆರಿಸಿ ಬಾಯಿಗೆ ಹಾಕಿದರು.

"ಎರಡೂ ಬಂತಲ್ಲವೇ ಅದರಲ್ಲಿ ?"

"ಏನು ಬುದ್ಧೀನೆ ನಿನ್ನದು. ಕೆಲಸಾನೇ ಮೀನ ಮೇಷ ಆಗಿರುವಾಗ ಮದುವೇ ಯೋಚನೆ ನಿನಗೆ."

''ಮತ್ತೆ ಕೆಲಸಕ್ಕೆ ಏನಂತಾನೆ ? ಬಂದು ಮೂರು ದಿನವಾದರೂ ಮಾತಾಡಿಲ್ಲವೇನು ? ರಾಯರು ಮುಂದಕ್ಕೆ ಸರಿದು ಪಿಚಕ್ಕನೆ ಉಗುಳಿ ಮತ್ತೆ ಎಂದರು:

''ಅವನಿಗೆ ಯೋಚನೆ ಮಾಡೋಕೆ ವೇಳೆ ಬೇಡವೇನು ? ನಮ್ಮದೋ ಅವನದೋ ಮಾತು ?"

''ನೀವು ಮಾತೆತ್ತಿದರೆ ತಾನೇ ಅವನು ಬಾಯಿ ಬಿಡೋದು. ಅದೇ ನಾನು ಅನ್ನೋದು ನಿಮಗೇಕೆ ಇದ್ದೀತು ಸಂಸಾರ ಭಾರ ಅಂತ."

''ಹೂ ಹೋಗಲಿ. ರಾಮು ಮಲಗಿದ್ದಾನೇನೋ ನೋಡು. ಈಗಲೇ ಮಾತಾಗಿ ಬಿಡಲಿ ನಿನ್ನೆದುರಿಗೇನೇ." ಶಂಕರಮ್ಮ ಎದ್ದು ರಾಮುನನ್ನು ಕರೆಯಲು ಒಳಕ್ಕೆ ಹೋದಳು. ವಾಸ್ತವವಾಗಿ ರಾಮು ಈ ಎಲ್ಲಾ ಸಂಭಾಷಣೆಯನ್ನು ಕೇಳುತ್ತಿದ್ದ. ಅವರ ಮಾತಿನ ಮೇಲೇ ತನ್ನ ಉತ್ತರಗಳನ್ನು ಕಲ್ಪಿಸಿಕೊಂಡು, ಮಾತಿಗೆ ಕರೆದರೆ ಸಾಕು ಎನ್ನುವ ಸ್ಥಿತಿಯಲ್ಲಿದ್ದ. ''ಇವಾಗ್ಲೇ ಮಲಗಿ ಬಿಟ್ಟವೆ'' ಎಂದು ರಾಜನನ್ನೂ ಮಗಳನ್ನು ನೋಡಿ, ''ನೀನಿನ್ನೂ ಎದ್ದಿದ್ದೀಯೇನು? ಅದೇನೋ ಹೊರಗೆ ಕರೀತಾರೆ ನೋಡು''ಎಂದು ರಾಮುನನ್ನು ಸಂಬೋಧಿಸಿದಳು. ''ಏನಂತೆ ಇಷ್ಟು ಹೊತ್ತಿನಲ್ಲಿ"ಎಂದು ರಾಮುನೂ ಆಕಳಿಕೆ ತೆಗೆದು ಮೈಮುರಿದು ಎದ್ದು ಕುಳಿತ.

''ಮತ್ತೆ ಯಾವಾಗಪ್ಪ ಅವರಿಗೆ ಹೊತ್ತಿರೋದು? ಹೋಗಿ ಮಾತಾಡು ಅದಕ್ಕೇನು ಕಳಕೋಳ್ತಿಯ'' ಎಂದು ಹುರಿದುಂಬಿಸಿ ರಾಮುನೊಡನೆ ಮತ್ತೆ ಜಗುಲಿಗೆ ಬಂದಳು. ರಾಮು ಕಣ್ಣೊರಸಿ ನಿಚ್ಚಳನಾದ.

''ಮುಂದೇನು ಮಾಡಬೇಕು ಅಂತ ಯೋಚನೆ ರಾಮು ?''

''ದವಾಖಾನೆ ತೆರೆಯೋದು ಅಂತಿದ್ದೀನಿ''

''ಸರಕಾರಿ ನೌಕರಿ ಉತ್ತಮವಾದೀತಲ್ಲವೇ ?''

''ಉತ್ತಮವೇನೋ ಸರಿ. ಅದಕ್ಕಿಂತ ಸ್ವಂತ ಒಳ್ಳೇಯದು.''

''ಸ್ವಂತವಿದ್ದರೆ ಅಪಾಯ ಹೆಚ್ಚಲ್ಲವೇ ?''

''ಅಪಾಯವಷ್ಟಾಗಿ ಬರಲಾರದು ಎನ್ನಿಸುತ್ತೆ"

''ಆಯ್ತು, ಸ್ವಂತ ದವಾಖಾನೇ ಅಂತ ನಿರ್ಧರವಾದರೂ, ಈಗ ಮತ್ತೊಂದಿಷ್ಟು ಹಣ ಬೇಡವೇನು ನಿನ್ನ ಕುರ್ಚಿ, ಮೇಜು, ಸೀಸೆ ಮದ್ದು

ಎಲ್ಲಕ್ಕೂ''

"ಅಷ್ಟೇನೆ ಪ್ರಶ್ನೆ ಈಗ. ಆದರೆ ಖರ್ಚೆಲ್ಲಾ ಮೂರು ತಿಂಗಳಲ್ಲೇ ತಿರುಗಿ ಬಿಡುತ್ತೆ.!''

"ಈ ಕೊಂಪೆಯಲ್ಲಿ ಏನು ದಕ್ಕೀತು ಬಿಡೋ ನಿನಗೆ'' ಎಂದು ಶಂಕರಮ್ಮ ಮಧ್ಯೆ ತಲೆ ಹಾಕಿದಳು.

"ಇಲ್ಲಿ ಅಂತ ಯಾರು ಹೇಳಿದರಮ್ಮ?''

"ಮತ್ತೆಲ್ಲಿ ಮಾಡ್ತೀಯ?" ಎಂದರು ರಾಯರು.

"ಮುಂಬಯಿಗೆ ಹೋಗೋಣ ಅಂತಾ"

"ಮುಂಬಯಿಯಲ್ಲಿ ಜಾಗ ಎಲ್ಲೋ ನಿನಗೆ ಮಾಡೋಕೆ?''

"ಅದಕ್ಕೆಲ್ಲಾ ಏರ್ಪಾಟು ಮಾಡಿದ್ದೇನೆ''

"ಅಂದರೆ!''

"ನಾನೂ ನಮ್ಮ ಗೆಳೆಯರೂ ಕೂಡಿ ತೆಗೀತೇವೆ. ಅವನದೇ ಮನೆಯಿದೆ. ಅವನೂ ಬಹಳ ದಿನ ಇರೋಲ್ಲ. ಮುಂದಿನ ವರ್ಷ ಇಂಗ್ಲೆಂಡಿಗೆ ಹೋಗುತ್ತಾನೆ. ಆದ್ರೂ ನನಗೇನೇ ಇರುತ್ತೆ ಆ ಮನೆ"

"ಬಾಡಿಗೆ ಎಷ್ಟು?"

"ಎಷ್ಟಾಗುತ್ತೋ, ನೋಡೋಣ. ಎಷ್ಟಾದರೂ ಗೆಳೆಯ. ಕಡಿಮೆಗೆ ಸಿಕ್ಕುತ್ತೆ. ಹಾಗೇ ಇದ್ದರೂ ಚಿಂತೆಯಿಲ್ಲದಂತಿದೆ''

"ನಿನಗೆಲ್ಲೋ ಹುಚ್ಚು ಕಾಣೋ ರಾಮು. ಮುಂಬಯಿಯಲ್ಲಿ ಬಾಡಿಗೆ ಇಲ್ಲದೆ ಮನೆ ಕೊಡೋ ಪುಣ್ಯಾತ್ಮರಿದ್ದಾರೇನು? ಸರಿಯಾಗಿ ವಿಚಾರಿಸಿ ನೋಡು. ಮುಂಬಯಿಗೆ ಹೋಗೋದು ಸುಮ್ಮನೇ ಬಾಯಿ ಮಾತು ಆಗಬಾರದು. ನನಗೇನೋ ಮನಸ್ಸಿಗೆ ಬರಲಿಲ್ಲ'' ಎಂದು ಒಂದು ನಿರ್ಧಾರ ವಾಣಿಯಿಂದ ನುಡಿದರು. ಸುಮ್ಮನೆ ಕುಳಿತಿದ್ದ ಶಂಕರಮ್ಮ ಧ್ವನಿ ಎತ್ತಿದಳು. ರಾಮು ಒಳಕ್ಕೆ ಮಲಗಲು ಹೋದ.

"ಈ ಕೊಂಪೆಯಲ್ಲಿ ಮೂರು ಆಣೆ ಚಿಪ್ಪು ಸಿಕ್ಕದು. ಸುಮ್ಮನೆ ಮುಂಬಯಿಗೇ ಹೋಗಲಿ ಬಿಡಿ.

''ಅಲ್ಲವೇ ವಕಾಲತ್ತು ವಹಿಸುವ ಮುಂಚೆ ನಿನ್ನ ಕಲೆ ಕಾಯಿಸಿ ನೋಡು. ಮುಂಬಯಿಯಲ್ಲಿ ಹೊಸಬನಾಗಿ ದುಡಿಯುವುದಕ್ಕಾಗುತ್ತದೆ

ಯೇನೆ.ಇನ್ನೂ ಹರಿಲಾಲನ ಸಾಲ ಮುಗಿಯಬೇಕು''

''ಇನ್ನೂ ಎರಡು ವರ್ಷ ವಾಯಿದೆ ಇದೆಯಲ್ಲವೆ ಸಾಲಕ್ಕೆ''

''ಬಡ್ಡಿ ಯಾರು ತೆರಬೇಕು?"

''ಅದಕ್ಕೇನು ಮಾಡಬೇಕು ? ಎಲ್ಲಿಂದ ಬರಬೇಕು? ಅವನೇನು ಕುಬೇರಪುರಿಯಿಂದ ತಂದಾನೆ?"

''ಕುಬೇರಪುರಿಯಿಂದ ತಾ ಅಂತ ಯಾರು ಹೇಳಿದರು ಈಗ? ಒಟ್ಟಿನಲ್ಲಿ ನಾನು ಹೇಳೋದು ಅರ್ಥ ಆಗಿಲ್ಲ ನಿನಗೆ''

''ನಿಮ್ಮದೇ ಅರ್ಥಬೇರೆ ಇದೆಯೇನು? ಹೋಗಲಿ ಬಿಡಿ ನೋಡೋಣ ಮುಂಬಯಿಗೆ"

''ಎಲ್ಲೋ ಕನಸು ಬಿದ್ದಿದೆ ಅವನಿಗೆ. ಹಾಗೇ ಇನ್ನು ಯಾರು ಮನೆ ಕೊಟ್ಟಾರು?''

''ಆಯಿತು ಕಾಗದ ಬರೆದು ತಿಳಿದುಕೊಳ್ಳೋದಕ್ಕಾಗಲ್ಲವೇನು?''

''ಅದೇನೆ ನಾನೂ ಹೇಳಿದ್ದು''

''ಮತ್ತೆ ಮೇಲೆ ಯಾಕೆ ರಾಗ ಎಳೆದಿರಿ. ನನಗೇನೋ ಸರಿ ಬರೋಲ್ಲ ಅಂತ!''

''ಆಯ್ತು ಹೋಗು ಸಾಕು. ತಲೆ ಕೆಟ್ಟು ಹೋಯ್ತು ನಿನ್ನ ಕಿರಿ ಕಿರೀಲಿ.'' ಎಂದು ರಾಯರು ಮುಖ ತಿರುವಿದರು.

''ಇವರ ವಿಚಾರವೇ ನನಗೆ ಅರ್ಥವಾಗದು. ಮಾತಾಡಿದರೆ ಗುಡುಗು ಸಿಡಿಲು'' ಎಂದು ಶಂಕರಮ್ಮ ಗೊಣಗುತ್ತಾ ಧಡಾರನೆ ಬಾಗಿಲು ಹಾಕಿದರು. ರಾಯರು ನೀಳವಾಗಿ ಉಸಿರೆಳೆದು ''ರಾಮಾ, ಕೃಷ್ಣಾ'' ಎಂದು ಹಾಸಿಗೆಯಲ್ಲಿ ಒರಗಿದರು.

ಜಯರಾಮನಿಂದ ಬಂದ ಪತ್ರದ ಸಂದರ್ಭವನ್ನು ಕಳೆದುಕೊಳ್ಳಲು ರಾಜಾರಾಯರೂ ಸಿದ್ಧರಿರಲಿಲ್ಲ. ಇದೇ ತಕ್ಕ ಸಮಯವೆಂದು ನಾರಾಯಣ ರಾಯರಿಗೆ ಪತ್ರ ಬರೆದದ್ದಲ್ಲದೆ,ಮಂಜುವಿನ ಉತ್ತಮ ಭಾವ ಚಿತ್ರವೊಂದನ್ನು ಕಳುಹಿಸಿದರು. ಪತ್ರ ಬಂದಾಗ ರಾಮು ಮನೆಯಲ್ಲಿರಲಿಲ್ಲ. ನಾರಾಯಣ ರಾಯರು ಪತ್ರವನ್ನೂ, ಚಿತ್ರವನ್ನೂ ನೋಡಿ ಸ್ವಲ್ಪ ಹೊತ್ತು ಸ್ತಬ್ಧರಾಗಿ

ದ್ದರು. ಶಂಕರಮ್ಮ ಬಾರದಿದ್ದಲ್ಲಿ ಅವರ ಈ ಸ್ಥಿತಿ ಎಷ್ಟು ಹೊತ್ತು ಇರುತ್ತಿತ್ತೋ ದೇವರೇ ಬಲ್ಲ !

"ಏನು ಹಾಗೆ ಮರಹೊಡೆದು ಕುಳಿತಿದ್ದಿರಿ" ಎಂದು ಕೇಳಿದರು. ರಾಯರು ಇನ್ನೂ ಮಾತನಾಡಲಾರರು. ಹಾಗೆ ಭಾವಚಿತ್ರ ನೀಡಿದರು.

"ಯಾರದ್ದಂತೆ ಇದು ?"

"ಮುಂದೆ ಬರುವ ಸೊಸೆಯದು"

"ಏನು ಹಾಗೆ ಮಾತಾಡಿದರೆ, ನನಗೇನೂ ಅರ್ಥವಾಗಲಿಲ್ಲ".

"ಮೊನ್ನೆ ರಾಮು ಹೇಳುತ್ತಿರಲಿಲ್ಲವೇನು, ಬಾಡಿಗೆ ಇಲ್ಲದ ಮನೆ ಸಿಕ್ಕುತ್ತೆ ಎಂದು. ಅವರ ಮಗಳದು".

"ಇಲ್ಲಿಗೇಕೆ ?

"ಅದನ್ನ ಕೇಳುತ್ತೀಯಲ್ಲ. ಹೆಣ್ಣು ಇದ್ದವರು ಗಂಡು ಹುಡುಕಲು ಏನಿದೆ ತಪ್ಪು ?ಮದುವೆ ಮಾಡಿಬಿಡೋಣ ಅಂತಾನೇ ಸೂಚಿಸಿಬಿಟ್ಟಿದ್ದಾರೆ ಪತ್ರದಲ್ಲಿ"

"ಇದೇನು ವಿಚಿತ್ರ ! ಮುಖನೋಡಿಲ್ಲ; ಪರಿಚಯ ಇಲ್ಲ. ಮಾತು ಕತೆ ಇಲ್ಲದ, ಅವಾಂತರ"

"ನಿನ್ನ ಮಗನದು ಅವಾಂತರ, ಅವರದ್ದಲ್ಲ. ಒಪ್ಪಿಗೆ ಕೊಟ್ಟು ಬಂದಿದ್ದಾನಂತೆ. "ನಮ್ಮ ತಂದೇಗೆ ನೀವೇ ಕಾಗದ ಬರೆದು ವಿಚಾರಮಾಡಿ ಕೊಳ್ಳಿ" ಎಂದು ಹೇಳಿದ್ದನಂತೆ. ಅದಕ್ಕೇನೆ ಅವರು ಬರೆದಿದ್ದಾರೆ" ಎಂದು ಮುಖ ಸಿಂಗರಿಸಿದರು ಕೋಪದಿಂದ.

"ಆಯ್ತಲ್ಲ. ಮದುವೇನೆ ಆಗ್ಲಿಲ್ಲವಲ್ಲ. ಹೋಗಲಿ. ಆಫೀಸಿಗೆ ಹೊತ್ತಾದೀತು. ಊಟಕ್ಕೇಳಿ. ಅವನು ಬರಲಿ ವಿಚಾರ ಮಾಡೋಣ." ಎಂದು ಮಾತು ನಿಲ್ಲಿಸಿ ಒಳಕ್ಕೆ ಹೋದರು. ರಾಯರು ನಿಟ್ಟುಸಿರೆಳೆದು ಒಳಕ್ಕೆ ಹೋದರು.

ರಾಮು ಮನೆಗೆ ಬಂದಾಗ ಪತ್ರ ಬಂದಿದ್ದು ತಿಳಿದಿರಲಿಲ್ಲ. ರಾಯರು ಎಲೆಯಡಿಕೆ ಹಾಕುತ್ತಾ ಕುಳಿತಿದ್ದರು. ರಾಮುನಿಗೆ ಬಂದ ಪತ್ರವನ್ನು ಅವನ ಕೈಗಿತ್ತು ಅವರು ಆಫೀಸಿಗೆ ಹೊರಡಲನುವಾದರು. "ವಿಶೇಷವೇನು ಬರೆದಿದ್ದಾರೆ ?" ಎಂದೂ ಕೇಳಿದರು.

"ಏನೂ ಇಲ್ಲ, ಮನೆ ಯಾವಾಗಲೂ ತಯಾರ್ ಇದೆ." ಎಂದು ಹೇಳಿ ಊಟಕ್ಕೆ ಒಳಕ್ಕೆ ಹೋದನು. ಅವನಿಗೆ ರಾಜಾರಾಯರು ತನ್ನ ತಂದೆಗೆ ಕಾಗದ ಬರೆದ ವಿಷಯ ಗೊತ್ತೇ ಇರಲಿಲ್ಲ. ಕಾಗದದಲ್ಲಿನ ವಿಷಯಗಳನ್ನು ಮೆಲುಕು ಹಾಕುತ್ತಾ ತಲೆಬಗ್ಗಿಸಿಕೊಂಡು ಊಟಮಾಡುತ್ತಿದ್ದ. ಶಂಕರಮ್ಮ ಕೈಯಲ್ಲಿ ಮಂಜುಳೆಯ ಚಿತ್ರವನ್ನು ಹಿಡಿದುಕೊಂಡು ಬಂದು:

"ಇದಾರೋ ರಾಮೂ ಹುಡುಗಿ?" ಎಂದರು. ರಾಮನಿಗೆ ಎದೆ ಧಸಕ್ಕೆಂದಿತು.

"ಕೊಡು ಇಲ್ಲಿ" ಎಂದು ತೆಗೆದುಕೊಂಡ.

"ಇದು ರಾವ್‌ಬಹದ್ದೂರ್ ರಾಜಾರಾಯರ ಮಗಳದು. ಅದೇ ಮನೆ ಕೊಡುತ್ತೇನೆ ಅಂತಾ ಹೇಳಿದಾರಲ್ಲಾ ಅವರದ್ದು. ಇಲ್ಲಿಗೇಕೆ ಬಂತು ಇದು ? ಇನ್ನೇನಾದರೂ ಕಾಗದ ಬಂದಿದೆಯೇನು?"

"ಹ್ಞೂ, ಬಂದಿದೆ ನೋಡು ತಗೋ" ಎಂದು ರಾಯರಿಗೆ ಬಂದಿದ್ದ ಪತ್ರ ಕೊಟ್ಟಳು. ರಾಮ ಗಾಬರಿಯಿಂದ ಸ್ವಲ್ಪ ಹೊತ್ತು ಓದಿದ.

"ಏನು ಬರೆದಿದಾರೆ ? " ಮತ್ತೆ ಶಂಕರಮ್ಮನ ಪ್ರಶ್ನೆ.

"ಅದೇ, ಮನೆ ಕೊಡುತ್ತೇನೆ, ಯಾವಾಗಲಾದರೂ ಬರಬಹುದು ಅಂತ ಬರೆದಿದ್ದಾರೆ"

"ಅಲ್ಲವೋ ನೆಲೆಗೊತ್ತಿಲ್ಲ, ಕುಲಗೊತ್ತಿಲ್ಲ, ಅವರಿಗೆ ಏನು ಅಂತ ಹೇಳಿ ಬಂದಿದ್ದೀಯ ?"

"ನಾನೇನು ಹೇಳಿದ್ದೇನಮ್ಮ ಅವರಿಗೆ. ಆ ವಿಚಾರವೇ ಮಾತಾಡಿಲ್ಲ".

"ಮತ್ತೆ ಅವರಿಗೆ ಪತ್ರ ಬಂದಿದೆಯಂತಲ್ಲೋ, ನಿಮ್ಮ ಹುಡುಗನ ಒಪ್ಪಿಗೆ ಇದೆ ಅಂತ".

"ಒಪ್ಪಿಗೆ ಅಂತಾ ಅಲ್ಲಮ್ಮಾ. ನೋಡೋಣ ನಮ್ಮ ತಂದೆಯವರದೇ ಎಲ್ಲಾ ಅಂತ ಹೇಳಿದ್ದೆ. ಅವರು ಹಾಗೆ ಬರೆದರೆ ನಾನೇನು ಮಾಡಲಿ ?"

"ಏನೋ ಎಂತೋ, ಅವರಾಗಲೇ ಬೆಳಗಿನಿಂದಲೇ ಮುಖ ಉರಿಸಿಕೊಂಡು ಓಡಾಡಿದ್ದಾರೆ. ಬಂದಮೇಲೆ ಕೇಳಿದರೆ ಏನು ಹೇಳುತ್ತೀಯೋ ನೋಡು." ರಾಮನ ಊಟವೂ ಮುಗಿದಂತಾಯ್ತು ಈ ಗಡಿಬಿಡಿ, ಗಾಬರಿಯಲ್ಲಿ. ಎದ್ದು ಕೋಣೆಯೊಳಕ್ಕೆ ನುಸುಳಿಕೊಂಡ.

ಸಂಜೆ ರಾಯರು ಮನೆಗೆ ಬಂದಾಗ ರಾಮನ ಸುಳಿವೇ ಇಲ್ಲ! ಶಂಕರಮ್ಮ ಕೂಡಾ ಏನೂ ಮಾತಾಡಲಿಲ್ಲ. ರಾತ್ರಿ ರಾಮು ಮನೆಗೆ ಬಂದಾಗಲೂ ಮಾತು ಬರಲಿಲ್ಲ. ರಾಮನಿಗೆ ಎದೆ ಹಾರಿ ಹಾರಿ ಬೀಳುತ್ತಿತ್ತು ಯಾವ ಹೊತ್ತಿನಲ್ಲಿ ಜ್ವಾಲಾಮುಖಿ ಸಿಡಿದೀತೋ ಎಂದು. ಊಟವಾದ ಮೇಲೆ ರಾಯರು ಜಗುಲಿಲ್ಲಿ ಕುಳಿತು ರಾಮನನ್ನು ಕರೆದರು. ಎದೆ ಮುಟ್ಟಿಕೊಂಡು, ಎದೆಯಿದೆಯೆಂದು ನಿರ್ಧರಮಾಡಿಕೊಂಡು ಹೋಗಿ ಕುಳಿತ. ಶಂಕರಮ್ಮ ಹಿಂದೆಯೇ ಬಂದಳೆಂದು ಬೇರೆ ಹೇಳಬೇಕೆ ? ರಾಯರೆಂದರು:

''ಏನು ಅಂತ ಒಪ್ಪಿಗೆ ಕೊಟ್ಟು ಬಂದಿದ್ದೀಯ ಅವರಿಗೆ ?''

"ನಾನೇನೂ ಒಪ್ಪಿಗೇನೆ ಕೊಟ್ಟಿಲ್ಲ. ಎಲ್ಲಾ ತಂದೆಯವರ ಮೇಲೆಯೇ ಇವೆ ಎಂದು ಹೇಳಿ ಬಂದಿದ್ದೇನೆ''

''ಅವರು ಯಾಕೆ ಹೀಗೆ ಪತ್ರ ಬರೆದಿದ್ದಾರೆ ?''

''ಬರೆಯ ಬೇಕಾದ್ದು ಬರೆದಿದ್ದಾರೆ. ನನಗೇನೂ ಅದು ತಿಳಿಯದು''

''ಏನು ಬರೆದಿದಾರೆ ಸ್ವಲ್ಪ ಓದಿಹೇಳಿ ನೋಡೋಣ'' ಎಂದು ಶಂಕರಮ್ಮ ಮಧ್ಯೆ ತಲೆಹಾಕಿದಳು.

''ಇನ್ನೇನಿದೆ ಅದರಲ್ಲಿ? ನಿಮ್ಮ ಹುಡುಗನ ಒಪ್ಪಿಗೆ ಇದೆ. ನಿಮ್ಮ ಒಪ್ಪಿಗೆ ಬಂದುಬಿಟ್ಟಲ್ಲಿ ಇದೇ ವರ್ಷವೇ ನಡೆಸಿ ಬಿಡುವ. ಮದುವೆ ಖರ್ಚೆಲ್ಲಾ ನಮ್ಮದೇ. ಒಬ್ಬಳೇ ಮಗಳು. ನೀವು ಏನು ಇಟ್ಟರೂ ಉಂಟು, ಕೊಟ್ಟರೂ ಉಂಟು, ನಮಗದರ ಯೋಚನೆಯೇ ಇಲ್ಲ. ಬೇಕಾದರೆ ಹುಡುಗಿಯನ್ನು ನೀವೇ ಬಂದುನೋಡಿಕೊಂಡು ಹೋಗಬಹುದು. ಅಥವಾ ನಾವೇ ಬಂದೇವು'' ಅಂತ ಬರೆದಿದ್ದಾರೆ. ಇಷ್ಟು ಬೇಗ ಮದುವೆ ಬೇಡ ಅನ್ನಿಸುತ್ತೇ ನನಗೇನೋ''

''ಯಾಕೆ? ಅಷ್ಟಾಗಿ ಮೇಲೆ ಬಿದ್ದು ಕೇಳುವಾಗ ಒಂದು ಸರಿ ನೋಡಿಯಾದರೂ ಬರೋಣ. ಹೆಣ್ಣು ಹೆತ್ತವರ ಹೊಟ್ಟೆ ಉರಿಸಬಾರದು. ನೋಡಿ ಬಂದರೆ ತಪ್ಪೇನಿದೆ?" ಎಂದಳು ಶಂಕರಮ್ಮ. ರಾಯರು ಅರಿತಿದ್ದರು, ಪರಿಸ್ಥಿತಿ ಇಲ್ಲಿಗೆ ಬರುತ್ತದೆಯೆಂದು. ಮತ್ತೆ ಮುಂದರಿಸಿದಳು: ''ಇಷ್ಟರ ಮೇಲೆ ರಾಮೂ ಒಪ್ಪಿಗೆ ಇದ್ದಲ್ಲಿ ನಾವಾದರೂ ಮಾಡುವುದೇನಿದೆ? ಒಟ್ಟಿನಲ್ಲಿ ಸುಖವಾಗಿದ್ದರೆ ತೀರಿತಲ್ಲವೇ?''

''ನಾನು ಹೇಳುವುದು ಅದಲ್ಲ ಶಂಕರೀ. ಏನೂ ಕೆಲಸವೇ ಹತ್ತದಿರುವಾಗ ಮದುವೆ ಮಾಡಿಕೊಂಡು ಯಾಕೆ ಕಷ್ಟಕ್ಕೆಬೀಳಬೇಕು.''

''ಇನ್ನೂ ಮದುವೆ ಮಾಸ ಆರು ತಿಂಗಳಿದೆಯಲ್ಲಾ. ಅಷ್ಟರಲ್ಲಿ ಕೆಲಸ ಹತ್ತಲಾರದೇನು?''. ರಾಮು ಎದ್ದು ಒಳಗೆ ಹೋಗಿಬಿಟ್ಟ. ರಾಯರು ತಿಳಿದರು ಅದು ಅಸಹನೆಯ ಚಿಹ್ನೆಯೆಂದು. ಆದರೆ ತಮ್ಮ ಹೇಳಿಕೆಯನ್ನೇನೂ ಬಿಡಲಿಲ್ಲ.

''ಅದೂ ಹೋಗಲಿ. ಅವರ ಅಂತಸ್ತಿಗೆ ನಮ್ಮ ಅಂತಸ್ತು ಹೊಂದದು. ಪರಿಣಾಮ ನೆಟ್ಟಗಾಗಲಿಕ್ಕಿಲ್ಲವೆನ್ನಿಸುತ್ತದೆ''

''ಅಂತಸ್ತು ಅಧಿಕಾರ ನಮಗೇನು ಮಾಡೀತು? ಗಂಡ ಹೆಂಡತಿ ಸುಖವಾಗಿದ್ದರೆ, ಕಣ್ಣು ತುಂಬ ನೋಡುವುದಷ್ಟೇ ನಮ್ಮ ಭಾಗ್ಯ"

''ಆ ಭಾಗ್ಯ ಸುಮ್ಮನೆ ಬರಲಾರದಲ್ಲವೇ'' ?

''ಅಯ್ಯೋ, ಅದೇಕೆ ಹಾಗೆ ಒಡನುಡಿಯುತ್ತೀರಿ'' ? ರಾಯರಿಗೆ ಈ ಸಂಬಂಧ ಹತ್ತಿಯೇ ಬಿಡುತ್ತದೆಂಬುದು ಖಾತ್ರಿಯಾದಂತಾಯ್ತು.

''ಅಲ್ಲವೇ ಶಂಕರೀ, ಅವರು ನೋಡಿದರೆ ದೊಡ್ಡ ಹಣವಂತರು ನಾವು ಹೊಟ್ಟೆ ಪಾಡಿಗೆ ನೌಕರಿ ಮಾಡುವವರು. ನಮಗೂ ಅವರಿಗೂ ಎಲ್ಲಿಯ ನಂಟಸ್ತನ. ಇದ್ದ ಬಿದ್ದ ಆಸ್ತಿಯೆಲ್ಲಾ ಸಾಲಕ್ಕೆ ಅಡವು ಹಾಕಿದ್ದಾಯಿತು. ವರ್ಷಕ್ಕೋ ಮುಂದಕ್ಕೋ ಸೀತೆಯ ಮದುವೆ ಬೇರೆ ಬರುವುದಿದೆ. ಅದಕ್ಕೇನೇ ದೊಡ್ಡವರ ಸಹವಾಸ ಎಂದಿದ್ದರೂ ಒಳ್ಳೇಯದಲ್ಲ. ಹುಲಿಯ ಬಣ್ಣಕ್ಕೆ ನರಿ ಮೈಸುಟ್ಟುಕೊಳ್ಳಬಾರದು.''

''ಮತ್ತು ಅದೇ ಹೇಳುತ್ತೀರಿಯಲ್ಲ. ಮದುವೆಯಾಗಿ ಬಂದರೆ ಆಸ್ತಿ ಹಣ ಏನೂ ಮಾಡಲಾರದು. ಅವರಷ್ಟಕ್ಕೆ ಹೊಂದಿಕೊಳ್ಳುತ್ತಾರೆ.''

"ಹಾಗಲ್ಲವೇ. ಆಕೆಯ ಭಾಗಕ್ಕೇ ೫೦ ಸಾವಿರವಷ್ಟು ಆಸ್ತಿ ಬರೆದಿದ್ದಾರಂತೆ ಅವರು. ಆ ಧನದ ಮದದಲ್ಲಿ ಆಕೆಗೆ ತಲೆತಿರುಗದೆ ಇದ್ದೀತೇನೆ? ನಿನ್ನ ರಾಮು ಆಕೆಯ ದಾಸನಾಗುತ್ತಾನೆ ನೋಡಿಕೋ. ಅದ್ಯಾಕೆ ನೀನೇ ನೋಡಿದ್ದಿಯಲ್ಲ ಆ ಸಂತೆಬೈಲು ಶೀನಪ್ಪನ ಗತೀನ? ಹೇಗೆ ಗಿಟುಗು ಮುಳ್ಳಾಡಿಸುತ್ತಾಳೆ? ಹಾಗಾಗಬಾರದೆಂದೇ ನನ್ನ ಇಷ್ಟ"

''ಹಾಗಾಗೋದಕ್ಕೂ ಕಾರಣ ಇದೆ. ಆ ಹುಡುಗಿ ಹಿಂದೆ ಅವಳ

ತಾಯಿ ಇದ್ದಾಳೆ ಎಲ್ಲಾ ಚುಚ್ಚಿ ಕೊಡ್ಡೋದಕ್ಕೆ. ಈ ಹುಡುಗಿ ಓದು ಕಲಿತು ದ್ದು, ತಾಯಿ ಬೇರೆ ಇಲ್ಲ, ಆ ವಿಪರೀತಕ್ಕೆ ಹೋಗಲಾರದು. ಏಕಷ್ಟು ಹೆದರಿಕೆ. ?"

"ಶಂಕರೀ, ನೀನಗೇನು ಗೊತ್ತು ಓದಿದ ಹುಡುಗಿಯರ ದೌಲತ್ತು? ಕಾಲು ಕೆಳಗೆ ಹಾಕಿಕೊಂಡು ಹೊಸಕಿಬಿಡುತ್ತಾರೆ ಕ್ರಿಮಿ ಹಾಗೆ. ಇವನು ದುಡಿಯೋದೆಲ್ಲಾ ಆಕೆಯ ಸೌಂದರ್ಯಕ್ಕೇ ಸಾಲದು. ನೋಡು ನಮ್ಮ ಆಫೀಸರು ಹೇಗಿದ್ದಾನೆ? ಮೈ ಮೇಲೆ ನೆಟ್ಟಗೆ ಒಂದು ಕೋಟಿಲ್ಲ. ಆಕಿ ನೋಡಿದರೆ ಬರೀ ಸಿಲ್ಕು ಸೀರೆ ಮೇಲೆ ತಿರುಗುತ್ತಾಳೆ. ಕಲಿತ ಹೆಣ್ಣುಗಳಲ್ಲಿ ಶಂಕರೀ, ಕೆಲವು ಗಂಡು ಬೀರಿಗಳು."

"ಎಲ್ಲರೂ ಹಾಗೆಯೇ ಇರುತ್ತಾರೇನು?. ಅದೇ ಹೇಳುತ್ತೇನಲ್ಲ, ನೀವು ಎಷ್ಟು ಮಾತಾಡಿದರೂ, ರಾಮು ಮನಸ್ಸು ಮಾಡಿಬಿಟ್ಟರೆ ನಮ್ಮ ಮಾತಿಗೇನೂ ಸಿಕ್ಕೋಲ್ಲ. ಅವನ ಮನಸ್ಸಿಗೆ ಬಂದ ಹಾಗೆ ಮಾಡಿಕೊಳ್ಳಲಿ, ಕಾಗದ ಬರೆದಿರುವುದಕ್ಕಾದರೂ ಹೋಗಿ ನೋಡಿಯೇ ಬರೋಣ; ಅದರ ಲ್ಲೇನು ಸವೆಯುತ್ತದೆ ನಮ್ಮ ಸಂಪತ್ತು" ಎಂದು ಮಾತಿಗೆ ತಡೆಹಾಕಿ ಶಂಕ ರಮ್ಮ ಮಲಗಲು ಒಳಕ್ಕೆ ಹೋದಳು.

ನಾರಾಯಣರಾಯರು ಶಂಕರಮ್ಮನ ಬಲವಂತದ ಮೇಲೆ ಬರುತ್ತೇ ವೆಂದು ಮುಂಬಯಿಗೆ ಕಾಗದ ಬರೆದು ರಾಮನೊಡನೆ ಪತ್ನೀ ಸಮೇತರಾಗಿ ಮುಂಬಯಿಗೆ ಬಂದಿಳಿದರು. ನಿಲ್ದಾಣದಲ್ಲೇ ರಾಜಾರಾಯರು ಹಾಜರು ! ಎಲ್ಲರನ್ನೂ ಆದರದಿಂದ ಸ್ವಾಗತಿಸಿ ಕಾರಿನಲ್ಲಿ ತಮ್ಮ ಸುಂದರ ಸೌಧಕ್ಕೆ ಕರೆ ದೊಯ್ದರು. ಶಂಕರಮ್ಮ ಈ ಎಲ್ಲಾ ಆಡಂಬರಕ್ಕೂ ಅರ್ಧ ಒಲಿದು ಹೋಗಿ ದ್ದಳು. ನಾರಾಯಣರಾಯರು ಮಾತು ಬಾರದವರಂತೆ ಮೌನವಾಗಿ ಕುಳಿತಿ ದ್ದರು. ರಾಮನೂ ಅಷ್ಟೇ.

ಬಂಗಲೆಗೆ ಬಂದಿಳಿದಾಗ ಅವರನ್ನು ಎದುರುಗೊಂಡುದುದು ರಾಜಾರಾ ಯರ ತಂಗಿ ಗಂಗೂವಿನ ಹಸನ್ಮುಖ. ಶಂಕರಮ್ಮನಂತೂ ಕ್ಷಣಹೊತ್ತು ಸ್ತಬ್ಧರಾದರು. "ಹುಡುಗಿಗಂತೂ ತಾಯಿಯಿಲ್ಲವಂತೆ. ಈಕೆ ಯಾರಿದ್ದಿರ ಬೇಕು"ಎಂಬ ಸಮಸ್ಯೆಯು ಆಕೆಯ ತಲೆ ಹೊಕ್ಕಿತು. ಅಂತೂ ಮನೆಯೊಳಕ್ಕೆ

ನಡೆದರು. ಆಕೆಯ ಸಮಸ್ಯೆಯನ್ನರಿತವರಂತೆ ರಾಜಾರಾಯರು ಎಲ್ಲವನ್ನೂ ಸಾಂಗವಾಗಿ ವಿವರಿಸಿದರು.

"ನೋಡಿಯಮ್ಮ, ಇಷ್ಟೇನಮ್ಮ ಸಂಸಾರ. ಆಕೆ ನನ್ನ ತಂಗಿ. ಮನೆಯಲ್ಲಿ ಯಾರೂ ಇಲ್ಲವೆಂತಲೇ ಆಕೆಯನ್ನು ಸಾಗರದಿಂದ ಕರೆಸಿದ್ದೇನೆ" ಎಂದು ಪರಿಚಯ ಮಾಡಿಕೊಟ್ಟು ನಾರಾಯಣರೊಡನೆ ದಿವಾನ್‌ಖಾನೆಗೆ ನಡೆದರು. ರಾಮನೂ ಮತ್ತೊಂದೆಡೆ ವಿಜಯನೊಡನೆ ಅಟ್ಟವೇರಿದ. ರಾಜಾರಾಯರದು ಚಾಣಾಕ್ಷ ಬುದ್ಧಿ. ಈ ಕಾರ್ಯದ ಸಾಫಲ್ಯ ಯಾರ ಕೈಯ್ಯಲ್ಲಿದೆಯೆಂಬುದನ್ನು ಚೆನ್ನಾಗಿ ಅರಿತೇ ಶಂಕರಮ್ಮನ ಮನಸ್ಸನ್ನು ಒಲಿಸಲು ಯತ್ನಿಸುತ್ತಿದ್ದರು. ಎಲ್ಲಾ ಹೆಂಗಸರ ಕೈಯಲ್ಲೇ ನಿಂತಿದೆಯೆಂದು ಅವರ ನಂಬಿಕೆ. ಅಂತೂ ಆಗಿನ ಪರಿಸ್ಥಿತಿ ನೋಡಿದರೆ ಶಂಕರಮ್ಮನ ನಿರ್ಧಾರವೇ ಕೊನೆಯದಾಗುವಂತಿತ್ತು.

ಶಂಕರಮ್ಮ ಆ ವಿಶಾಲ ಬಂಗಲೆಯ ಆವರಣ, ಘನತೆ, ಆಡಂಬರಗಳನ್ನು ನೋಡಿ ಕಕ್ಕಾವಿಕ್ಕಿಯಾಗಿದ್ದಳು. ಗಂಗೂ ಮುಖದ ಮೇಲೆ ಮುತ್ತೈದೆಯ ಯಾವ ಗುರುತೂ ಇದ್ದಂತೆ ಕಾಣಲಿಲ್ಲ. ಕೇಳಲು ಅಸಹಜವಾದ ಅವಮರ್ಯಾದೆ. ವಾಸ್ತವವಾಗಿ ಗಂಗೂ ಗಂಗಾ ಭಾಗೀರಥಿಯೇ ಆಗಿದ್ದಳು. ಹೋದ ವರ್ಷವಷ್ಟೇ ಆಕೆಯ ಗಂಡ ಹೇಳಲಾರದ, ಹೇಳಬಾರದ ರೋಗದಿಂದ ನರಳಿ ಸತ್ತ ನಂತರ ರಾಜಾರಾಯರಿಗೂ ಯಾರೂ ಗತಿಯಿಲ್ಲವೆಂದು ನೇರವಾಗಿ ಮುಂಬಯಿಗೆ ಬಂದಿಳಿದಳು. ಮೈದುನನೇ ತನ್ನ ಪತಿಯ ಸರ್ವ ಆಸ್ತಿಗೂ ಒಡೆಯನಾದನು. ಜೀವನಾಂಶವಿಷ್ಟು ಬರುವ ಏರ್ಪಾಡೂ ಆಯಿತು. ರಾಜಾರಾಯರ ಬಲವಂತದ ಮೇಲೆ ಗಂಗೂ ಸಕೇಶಿಯಾಗಿರಲು ಒಪ್ಪಿದಳು. ಆಕೆಯಿನ್ನೂ ಅರ್ಧ ವಯಸ್ಸಿಗೆ ಮುಟ್ಟಿರಲಿಲ್ಲವೆಂದೇ ಹೇಳಬೇಕು ಈ ವೈಧವ್ಯ ಪ್ರಾಪ್ತವಾದಾಗ. ಸಂಸಾರ ಸುಖವನ್ನು ಉಂಡೂ ಉಣ್ಣಲಾರದವಳಂತೆ ಬಂದು ಸೇರಿಕೊಂಡಿದ್ದಳು.

"ನಿಮ್ಮ ಹೆಸರೇನೋ ಕೇಳಲೇ ಇಲ್ಲವಲ್ಲ" ಎಂದು ಶಂಕರಮ್ಮನೇ ಮಾತಿಗಾರಂಭಿಸಿದಳು.

"ಗಂಗಾಬಾಯಿ. ತಮ್ಮ ಹೆಸರು?"

"ಶಂಕರಮ್ಮ"

"ನಿಮ್ಮ ಯಜಮಾನರದೇನು ಕೆಲಸ?''

"ತಾಲೂಕು ಆಫೀಸಿನಲ್ಲಿ ಶಿರಸ್ತೇದಾರರಿದ್ದಾರೆ"

"ನಮ್ಮ ಯಜಮಾನರೂ ಮೊದಲು ಕೆಲಸದಲ್ಲಿದ್ದರು. ಆ ಮೇಲೆ ನಮ್ಮ ತಂದೆ ಕಡೆಯಿಂದ ತೋಟ, ಎರಡು ಪ್ಲಾಂಟೇಶನ್ ಬಂದುವು ಕಡೂರು ಕಡೆ. ಏನು ಹೇಳಿಕೊಂಡು ಏನು ಪ್ರಯೋಜನ ಎಲ್ಲಾ ಹೋಯ್ತು. ಅವರೂ ಕೈಬಿಟ್ಟು ಹೋದರು'' ಎಂದವಳೇ ಧಾರಾಕಾರವಾಗಿ ಅಳಲಾರಂಭಿಸಿದಳು. ಹೆಣ್ಣಿನ ಕೆಲಸವೇ ಅಷ್ಟಲ್ಲವೇ ? ಇಲ್ಲದ್ದನ್ನು ನೆನಸಿಕೊಂಡು ಕಣ್ಣೀರು ಹಾಕುವುದು ? ಶಂಕರಮ್ಮನಿಗೆ ದಿಗ್ಭ್ರಮೆಯಾಯಿತು. ಇನ್ನೇನು ಮಾಡಿ ಯಾಳು ?

"ಹೋಗಲಿ ಬಿಡಿ ಬಾಯಿಯವರೇ. ಆದುದಾಯಿತಲ್ಲ. ಏನೋ ದೇವರ ಹಾಗೆ ಒಳ್ಳೆಯ ಅಣ್ಣ ಸಿಕ್ಕಿದರು ಅಂತಾನಾದ್ರೂ ಸಂತೋಷಪಡಿ'' ಎಂದು ಸಮಾಧಾನೋಕ್ತಿಗಳನ್ನಾಡಿದಳು. ಸ್ವಲ್ಪ ಹೊತ್ತು ಬಿಕ್ಕಿ ಬಿಕ್ಕಿ ಅತ್ತು ಮುಖ ಒರಸಿಕೊಂಡು ಸುಮ್ಮನಾಗಿ:

"ಮಂಜೂ, ಕಾಫೀ ತಯಾರಿದ್ದರೆ ತಂದುಕೊಡು" ಎಂದಳು.

"ನೀವು ಕಾಫಿ ಕುಡಿಯುತ್ತಿರೋ, ಹಾಲೋ ?"

"ಅಯ್ಯೋ ಏನೂ ಬೇಡಿ ಸದ್ಯಕ್ಕೆ. ಸ್ನಾನವಿಲ್ಲದೇ ಏನು ಅಷ್ಟು ಅವಸರ" ಎಂದಳು ಶಂಕರಮ್ಮ.

"ಚಿಂತೆಯಿಲ್ಲ, ನಾಲ್ಕು ಹಣ್ಣು ತಿಂದು, ಹಾಲುಕುಡಿಯಿರಿ., ನಂತರ ಆಗಲಿ ನಿಮ್ಮ ಸ್ನಾನ, ಊಟ ಎಲ್ಲಾ" ಎಂದು ಗಂಗೂನೇ ಸ್ವತಃ ಎದ್ದು ಹೋದಳು ಫಲಹಾರ ತರಲಿಕ್ಕೆ.

"ಅಯ್ಯೋ, ನೀವೇಕೆ ಅಷ್ಟು ತೊಂದರೆ ತಗೋಳ್ತಿರಿ. ಬನ್ನಿ" ಎಂದು ಶಂಕರಮ್ಮ ಎಂದರೂ, ಆಕೆ ಅಷ್ಟರಲ್ಲೇ ಮರೆಯಾದಳು.

ಗಂಗೂ ಒಂದು ತಟ್ಟೆಯಲ್ಲಿ ಬಾಳೆಹಣ್ಣು, ಕಾಬೂಲ್ ದ್ರಾಕ್ಷಿ,ದಾಳಿಂಬೆಯ ಎರಡು ತುಂಡುಗಳು, ಸೇಬು, ಎಲ್ಲವನ್ನೂ ಇಟ್ಟುಗೊಂಡು ಬಂದಳು. ಆಕೆಯ ಹಿಂದೇ ಮಂಜು ಹಾಲಿನ ಕೆಟಲ್‌ನ್ನೇ ತಂದಳು. ಮುಖಕೆಳಗಿಟ್ಟು ಕೊಂಡು ಮೆಲ್ಲಗೆ ನಡೆದು ಬಂದು ತಟ್ಟೆಯನ್ನು ಕೆಳಗಿಟ್ಟು, ನಿಂತಳು. ಗಂಗೂ "ಕೂತುಕೋ ಮಂಜು" ಎಂದಾಗ ಮಾತ್ರವೇ, ಆಕೆ ಕುಳಿತಳು. ತಲೆ

ಮಾತ್ರ ಮೇಲಕ್ಕೆತ್ತಲೇ ಇಲ್ಲ. ಹಸುರು ಪತ್ತಲದ ಸೀರೆಯ ಮೇಲೆ ಆಕೆಯ ಮೈಯ ಸುಂದರ ವರ್ಣ ಮತ್ತೂ ಹೆಚ್ಚಿತ್ತು. ನಾಚಿಕೆಯಿಂದ ಕೆಂಪಡರಿದ ಮುಖ ಸ್ವಲ್ಪ ಚೆನ್ನಾಗಿಯೇ ಕಂಡಿತು ಶಂಕರಮ್ಮನಿಗೆ. ಶಂಕರಮ್ಮ ಕ್ಷಣದಷ್ಟು ಮಾತ್ರವೇ ಆಕೆಯನ್ನು ದಿಟ್ಟಿಸಿದಳು. ಅಷ್ಟರಲ್ಲೇ ಗಂಗೂವಿನ ಆಜ್ಞೆಯ ಮೇರೆಗೆ ನೀರು ತರಲು ಹೋದಳು. ಶಂಕರಮ್ಮನಿಗೇನೋ ಹುಡುಗಿ ಮನಸ್ಸಿಗೆ ಬಂದತಾಯ್ತು. ಇನ್ನೂ ಹೊರಗಿನವರ ವಿಚಾರವೊಂದೇ ಉಳಿದದ್ದು. ಹೊರಗಡೆ ರಾಜಾರಾಯರದು, ನಾರಾಯಣರಾಯರದು ಮಾತು ನಡೆದಿತ್ತು. ರಾಜಾರಾಯರೆಂದರು;

"ನೀವು ಸ್ವಲ್ಪ ದಿವಸ ಬಾರಾಮತಿಯಲ್ಲಿದ್ದಿರೇನು ?"

"ಹೌದು "

"ಹಾ, ಅದೇ ನನಗೆಲ್ಲೋ ನೋಡಿದ ಜ್ಞಾಪಕ.

"ಇನ್ನೆಷ್ಟು ದಿನ ಇದೆ ಸರ್ವಿಸ್ ನಿಮ್ಮದು ?"

"ಇನ್ನೂ ಮೂರು ವರ್ಷವಷ್ಟೇ ಇದೆ. "

"ಸಕಲೇಶಪುರದ ಹಂಚಿನಮನೆಯವರು ನಿಮಗೇನಾಗಬೇಕು ?"

"ನಮ್ಮ ಚಿಕ್ಕಪ್ಪನ ಮಕ್ಕಳು. ಮೊದಲು ನಮ್ಮದೇ ಹಂಚಿನ ಮನೆ ಎಂದಿದ್ದದ್ದು ನಮ್ಮ ತಂದೆ ಸಾಯುವಾಗ ಏನೂ ವ್ಯವಸ್ಥೆಯಿಲ್ಲದಂತಾದ್ದಕ್ಕೆ ನಮಗೇನೂ ದಕ್ಕಲಿಲ್ಲ. ಹಂಚಿನ ಮನೆಯವರಿಂದ, ಹೆಸರಷ್ಟೇ ಉಳಿಯಿತು. ಸ್ವಲ್ಪ ಚಿರ ಆಸ್ತಿ, ಗದ್ದೆ, ತೋಟ ಅಷ್ಟೇ "

"ಹಾಗಾದರೆ ನಿಮಗೆ ನಮ್ಮ ಮಾವನವರು ಗೊತ್ತಿದ್ದಿರಬೇಕು ?''

"ಹೆಸರೇನು ಹೇಳಿ ?"

"ವೆಂಕಟೇಶಯ್ಯನವರು. ಬರೀ ಕಾಫೀ ತೋಟಾನೇ ಹೆಚ್ಚು ಅವರದು."

"ಅವರ ಹೆಸರೇನೋ ಕೇಳಿದ್ದೆ. ಒಂದೆರಡು ಸಲವಷ್ಟೇ ನೋಡಿದ್ದೆ ಏಕೆಂದರೆ ನಾನು ಹೆಚ್ಚಾಗಿ ಅಲ್ಲಿರುತ್ತಿರಲಿಲ್ಲ. ಓದುವದಕ್ಕೆ ಈ ಕಡೆ ಬಂದು ಬಿಟ್ಟೆ."

"ಅಯ್ಯೋ, ಆಗಿನ ಜನದ ವಿಚಾರ ಏನು ಹೇಳುವುದು ಬಿಡಿ. ನಮಗೆಲ್ಲಿ ಬರಬೇಕು ಆ ಘನತೆ, ಗೌರವ. ಅವರು ಕೊಟ್ಟ ಹೆಣ್ಣನ್ನು ಇಟ್ಟುಕೊಳ್ಳುವ

ಸೌಭಾಗ್ಯ ನನಗಿರಲಿಲ್ಲ. ಏನೋ ಹೆಸರುಳಿಸೋದಕ್ಕೆ ಒಂದೆರಡು ಮಕ್ಕಳನ್ನು ಬಿಟ್ಟು ಹೋದಳು" ಎಂದು ಒಮ್ಮೆ ನಿಟ್ಟುಸಿರೆಳೆದರು ಬಹಳ ನೊಂದವರಂತೆ. ನಾರಾಯಣರಾಯರೂ "ಪಾಪ; ಏನು ಮಾಡಲಿಕ್ಕಾದೀತು ನಾವಾದರೂ ದೈವದ ಮುಂದೆ" ಎಂದು ಆರಿಸುವ ದನಿಯಿಂದ ನುಡಿದರು, ಅವರ ಕೃತಕ ನೋವನ್ನು.

"ಹ್ನೂ, ಯಾಕೆ ಇವೆಲ್ಲಾ ಬಂದವರ ಮುಂದೆ ಹೇಳಿಕೊಂಡು ಮನಸ್ಸು ನೋಯಿಸಬೇಕು? ಬಂದಾಗಿನಿಂದ ಏನೂ ಫಲಾಹಾರ ಮಾಡಿಯೇ ಇಲ್ಲವಲ್ಲವೇ" ಎಂದು ಕಾರ್ಯಭಾರದಿಂದ ಎಚ್ಚರಗೊಂಡು, "ನಾರಾಯಣ, ಹಣ್ಣು ತಗೊಂಡು ಬಾ ಸ್ವಲ್ಪ" ಎಂದರು.

"ಅಯ್ಯೋ ಇನ್ನೂ ಮುಖ ಕೂಡಾ ತೊಳೆದಿಲ್ಲ. ಆಗಲೇ ಫಲಹಾರ ಎನ್ನುತಿದ್ದೀರಲ್ಲ" ಎಂದರು ನಾರಾಯಣರಾಯರು.

"ಅದಕ್ಕೇನ್ರಿ? ಬನ್ನಿ. ಮುಖ ತೊಳೆದುಕೊಂಡು ಬರೋಣ" ಎಂದು ಬಚ್ಚಲ ಮನೆಗೆ ಕರೆದುಕೊಂಡು ಹೋಗಿ, ಮುಖತೊಳೆಸಿಕೊಂಡು ಮತ್ತೆ ದಿವಾನ ಖಾನೆಗೆ ಬಂದರು. ಹಣ್ಣಿನ ತಟ್ಟೆಯಾಗಲೇ ಮೇಜನ್ನಲಂಕರಿಸಿತ್ತು.

ನಾರಾಯಣರಾಯರೂ ಹೆಚ್ಚು ಮಾತಾಡದೆ,ಹಣ್ಣುಗಳನ್ನು ನುಂಗಿದರು ರಾಜಾರಾಯರಿಗಂತೂ ಎಷ್ಟೋ ವರ್ಷಗಳಿಂದಲೂ ಅದೇ ಆಹಾರವಾಗಿತ್ತು. ನಾರಾಯಣರಾಯರು ಹಸಿವಿನಿಂದ ಬಳಲುತ್ತಿದ್ದರಾದ್ದರಿಂದ ಅವನ್ನು ತಿನ್ನುವುದು ಸಹಜವೇ ಆಗಿತ್ತು. ಆದರೆ ರಾವ್ ಬಹದ್ದೂರರಿಗೆ ನೀರು ಕುಡಿಯುವುದೇ ಪ್ರಯಾಸವೆನ್ನುವಾಗ ಹಣ್ಣುಗಳು ಎಲ್ಲಿ ಅರಗಬೇಕು? ಅದೂ ಇದೂ ಮಾತಾಡುತ್ತಾ ಫಲಹಾರ ಮುಗಿಸಿ,ಹಾಲು ಕುಡಿದು,ಒಮ್ಮೆ ಗುಟುಕು ಹಾಕಿದರು. ನಾರಾಯಣರಾಯರು ಸಹಜವಾಗಿ ಎಲೆಯಡಿಕೆಗೆ ಕೈ ಹಾಕಿ ಸಾಕಷ್ಟನ್ನು ಮುಗಿಸಿದರು. ಮುಂದೆ ಬೀಗರಾಗಬೇಕಾಗಿದ್ದವರು ಈಗಾಗಲೇ ಬಹಳ ನಿಕಟಾನುವರ್ತಿಗಳಂತೆಯೇ ಆಗಿಹೋಗಿದ್ದರು.

ಮಧ್ಯಾಹ್ನದ ಏರು ಹೊತ್ತಿಗೆ ಸ್ನಾನ ಮುಗಿದು ಊಟವೂ ಮುಗಿದಂತಾಯ್ತು. ರಾಜಾರಾಯರಿಗೆ ಮುಖ್ಯವಾಗಿ ಬೇಕಾಗಿದ್ದುದು ಇವರ ಒಪ್ಪಿಗೆ ಅದಕ್ಕೆ ಏನೇನು ಸಾಧ್ಯವೋ ಅವಿಷ್ಟನ್ನೂ ಉಪಯೋಗಿಸಿದ್ದರು. ಊಟವಾದ ಮೇಲೆ ಮತ್ತೆ ಅಟ್ಟವೇರಿ ಕುಳಿತು, ಎಲೆಯಡಿಕೆ ಹಾಕುತ್ತಾ, ನಾರಾಯಣ

ರಾಯರೆಂದರು.

"ಬರೀ ನಿಮ್ಮ ತೊಂದರೆಗಾಗಿಯೇ ಬಂದಂತಾಗಿದೆಯಲ್ಲಾ ನಾವು. ಮತ್ತೆ ಯಾವಾಗ........" ಎಂದು ಮಾತು ಮುಗಿಯುವಷ್ಟರಲ್ಲಿಯೇ, ರಾಜಾ ರಾಯರು ನಡುವೆ ಬಾಯಿಹಾಕಿದರು: "ಅಯ್ಯೋ ಅದೆಲ್ಲಾ ಏನು ಕಷ್ಟ ನಮಗೆ. ಆಗಲಿ ಸಾಯಂಕಾಲವೇ ನೋಡಿ ಬಿಡಿ ಹುಡುಗೀನ. ಅದಕ್ಕೇನು" ಎಂದರು.

"ಏಕಂದರೆ ನಾನು ರಾತ್ರಿಯೇ ಹೊರಡೋಣ ಅಂತ ಇದ್ದೇನೆ. ಅಷ್ಟೇ ಹೊರತು ಇನ್ನೇನು ಅರ್ಥ ಕಲ್ಪಿಸಿಕೊಳ್ಳಬಾರದು'' ಎಂದು ನಾರಾಯಣ ರಾಯರು ತಮ್ಮ ಮನೋಗತವನ್ನು ವ್ಯಕ್ತಪಡಿಸಿದರು. ರಾಜಾರಾಯರೂ ಅವರ ಇಂಗಿತವನ್ನರಿತು ಹೇಳಿದರು.

"ಛೆ, ಛೆ. ಅದೆಲ್ಲಾ ಏನಂತೆ. ಪಾಪ ನೀವು ಇಷ್ಟು ದೂರ ಬಂದಿರು ವುದೇ ಆ ಕಾರ್ಯಕ್ಕಾಗಿ. ಅದಕ್ಕೇಕೆ ನಮ್ಮ ಅರ್ಥಾನರ್ಥ. ಅದಿರಲಿ. ನೀವು ಅಷ್ಟು ಅವಸರವಾಗಿ ಹೊರಡುವುದೇನು? ನಾಳೆ ಒಂದು ದಿನ ಇದ್ದು ಹೊರಟು ಬಿಡುವಿರಂತೆ. ನಿನ್ನೆ ರಾತ್ರಿಯೆಲ್ಲಾ ನಿದ್ದೆಗೆಟ್ಟು ಬಂದಿದ್ದೀರಿ."

"ಇಲ್ಲಾ, ಕ್ಷಮಿಸಿ ಬಿಡಿ. ನಾನು ಹೋಗಲೇ ಬೇಕು"

"ಆಯಿತು, ನಮ್ಮ ನಿಮ್ಮದಾದರೂ ಏನಿದೆ. ಎಲ್ಲವೂ ಹೆಂಗಸರ ಒಪ್ಪಿ ಗೆಯ ಮೇಲೆ ಆಗ ಬೇಕಷ್ಟೆ. ಆ ಮಹಾತಾಯಿ ಮನಸ್ಸು ಮಾಡಿದರೆ ನಾನು ಗೆದ್ದೆ" ಎಂದರು ರಾಜಾರಾಯರು.

"ಹಾ, ಅದು ಸರಿ ನೋಡಿ. ಅದನ್ನೇ ನಾನೂ ಹೇಳಬೇಕೂ ಅಂತಿದ್ದೆ'' ಎಂದು ಮುಂದೆ ಆಗಬಹುದಾದ ಘಟನೆಗಳನ್ನು ಕಲ್ಪಿಸಿಕೊಂಡು, ಶಂಕರಮ್ಮನ ಕೈ ಮೇಲಾದೀತೆಂದು ತಮ್ಮ ಅಸಹಾಯಕ ಸ್ಥಿತಿಯನ್ನು ಮೊದಲೇ ಹೇಳಿಕೊಂಡು ಬಿಟ್ಟರು.

ಸಂಜೆಗೆ ಮಂಜುವನ್ನು ನೋಡಿದ್ದಾಯಿತು. ಇನ್ನು ಊರಿಗೆ ಹೊರ ಡುವ ತಯಾರಿ ನಡೆಯಿತು. ನಾರಾಯಣರಾಯರಿಗೇನೋ ಅರ್ಧ ಮರ್ಧ ಮನಸ್ಸು ಇತ್ತು. ಅವರನ್ನು ಕಾಣುತ್ತಿದ್ದ ಒಂದೇ ಭಯ ಆ ಹುಡುಗಿಯ ಮುಖನೋಡಿದ ಮೇಲೆ ಮತ್ತಷ್ಟು ಹೆಚ್ಚಾಯಿತು. "ಈ ಕಲಿತ ಧನವಂತ

ಹುಡಿಗೆಯ ಕೈಯಲ್ಲಿ ನಮ್ಮ ಹುಡುಗ ಕಂಗಾಲಾಗುತ್ತಾನೆ." ಎಂದು ಮೊದಲೇ ಹೇಳಿಕೊಂಡರು ತಮ್ಮಲ್ಲೇ.ಆದರೆ ರಾಮನಂತೂ ನಿರ್ಧಾರ ವಾಣಿ ಯಿಂದ, ಅವನಿಗೆ ಏನು ಆವೇಶ ಬಂದಿತ್ತೋ ನುಡಿದೇ ಬಿಟ್ಟ. "ನಾನು ಒಪ್ಪಿ ಬಿಟ್ಟಿದ್ದೇನೆ. ಯಾರೂ ಏನೂ ಮಾಡುವ ಹಾಗಿಲ್ಲ." ಎಂದಮೇಲೆ ತಾವು ಏನು ಹೇಳಿದರೂ, ಏನು ಮಾಡಿದರೂ ಇದು ತಪ್ಪಲಾರದು ಎಂದು ಮನ ದೊಳಗೇ ಕೊರಗಿದರು. ಶಂಕರಮ್ಮನಂತೂ ಆಗಲೇ ಬೆಳಗಿನಿಂದಲೇ ಬೀಗಿ ತಿಯಷ್ಟು ಪರಿಚಯದಿಂದ ಹೊರಗೆ ಒಳಗೆ ಓಡಾಡಿ ತಮ್ಮ ಒಪ್ಪಿಗೆಯನ್ನು ಕೊಟ್ಟಂತೆಯೇ ತೋರಿಸಿದರು. ರಾಜಾರಾಯರೂ ಆಕೆಯ ಮುಖದ ಕಳೆಯ ಮೇಲೆ ಲೆಕ್ಕಹಾಕಿದರು ತಮ್ಮ ಕಾರ್ಯ ಸಫಲವಾಯಿತೆಂದು. ವಿಜಯ ರಾಮನ ಮನಸ್ಸನ್ನು ತಿರುಗಿಸಲು ಒಂದು ವರ್ಷವನ್ನೇ ವೆಚ್ಚಮಾಡಿದ್ದು ದೂ ಸುಮ್ಮನಾಯಿತೇನು? ಒಟ್ಟಿನಲ್ಲಿ ಎಲ್ಲರಿಗೂ ಒಪ್ಪಿಗೆಯಾಗಿ ಸಂತೋಷ ಉಕ್ಕು ತ್ತಿರುವಾಗ. ನಾರಾಯಣರಾಯರೊಬ್ಬರಿಗೇ ಚಿಂತೆ ಹುಟ್ಟಿತ್ತು.

ಆದರೂ ಹೊರಗೆ ಏನೂ ತೋರಿಸಲಾರದ, ಗೌರವವ ಭಾವದಿಂದ ಮಾತುಕತೆಯಾಡಿ ಪ್ರಯಾಣಕ್ಕೆ ಸಿದ್ಧರಾದರು. ರಾಮನನ್ನು ಹಿಡಿಯಲು ಯಾರುಂಟು! ಅವನಿಗಿಂತ ಹೆಚ್ಚಾಗಿ ಶಂಕರಮ್ಮನ ಉತ್ಸಾಹಕ್ಕೆ ಪಾರವೇ ಇಲ್ಲದಂತಾಗಿತ್ತು. ರಾತ್ರಿಯ ಹತ್ತು ಗಂಟೆಯ ಗಾಡಿಗೆ ರಾಜಾರಾಯರು ತಿಕೀಟು ಮೊದಲೇ ತೆಗೆಸಿಟ್ಟಿದ್ದರು. ಶಂಕರಮ್ಮ, ಗಂಗಮ್ಮನೊಡನೆ ಮಾತು ಮುಗಿಸಿ ಹೊರಬೀಳುವುದರಲ್ಲಿ ರಾಜಾರಾಯರು ಹಾಜರಿದ್ದರು ದಿವಾನ್ ಖಾನೆಯಲ್ಲಿ.

"ಎಲ್ಲಾ ನಿಮ್ಮ ದೊಡ್ಡ ಮನಸ್ಸು ನೋಡಿಯಮ್ಮ" ಎಂದು ಶಂಕರ ಮ್ಮನ ಮನೋಭಾವವನ್ನರಿತು ನಗುತ್ತ ನುಡಿದರು.

"ನಮ್ಮದೇನು ಇದೆ ಹೇಳಿ ? ಹುಡುಗನ ಒಪ್ಪಿಗೆ ಬಂದ ಮೇಲೆ ?"

"ಅದು ಸರಿಯೇ. ಆದರೂ ತಂದೆ ತಾಯಿಗಳ ಮೇಲೆಯೇ ತಾನೇ ಎಲ್ಲಾ ನಿಂತಿರೋದು ?"

"ಅದೆಲ್ಲಾ ಏನು ಬಂತು. ಅವರ ಸುಖವೇ ನಮ್ಮ ಸುಖ. ನಮ್ಮ ಮೇಲೇನು ಅಷ್ಟು ಜವಾಬ್ದಾರಿ. ಆಯಿತು ಬರುತ್ತೇನೆ. ಅಲ್ಲಿಂದ ಜಾತಕ ಕಳುಹಿಸುತ್ತೇವೆ. ಎಲ್ಲಾ ಹೊಂದಿಕೆಯಾದರೆ ನಾವು ತಡೆಯುವುದೇನೂ

ಇಲ್ಲ. ಎಂದು ಮಾತು ಮುಗಿಸಿ ಹೊರಬಿದ್ದರು. ಎಲ್ಲರೂ ಮತ್ತೆ ಕಾರಿನಲ್ಲಿ ನಿಲ್ದಾಣಕ್ಕೆ ಬಂದರು. ರೈಲು ಹೊರಡುವ ಸಿದ್ಧತೆಯಲ್ಲಿತ್ತು. ಗಡಿಬಿಡಿಯಿಂದ ಮೂವರೂ ರೈಲುಹತ್ತಿ ಮತ್ತೊಮ್ಮೆ ರಾಜಾರಾಯರಿಗೆ ನಮಸ್ಕಾರ ಮಾಡಿದ ನಂತರ ರೈಲು ನಿಧಾನವಾಗಿ ಚಲಿಸಿತು.

ರೈಲಿನಲ್ಲಿ ಎಲ್ಲರೂ ಸ್ವಲ್ಪ ಹೊತ್ತು ಸುಮ್ಮನಿದ್ದರು. ರಾಮು ಮೇಲಿನ ಹಾಸನ್ನು ಹತ್ತಿ ಮಲಗಿ ಬಿಟ್ಟ. ಕೆಳಗಿನ ಜಾಗದಲ್ಲಿ ನಾರಾಯಣರಾಯರು ಶಂಕರಮ್ಮ ಇಬ್ಬರೂ ತಮ್ಮ ವಾಕ್ಚಾತುರ್ಯವನ್ನು ಪರೀಕ್ಷೆಗೆ ಹಾಕಿದವರಂತೆ, ಒಂದು ಕೈ ಮೇಲಾಗಿಯೇ ಗಂಟಲು ದೊಡ್ಡದು ಮಾಡಿದ್ದರು.

"ಏನಂತೀರಿ, ಹುಡುಗೀನ?''

''ನನ್ನ ಏನು ಕೇಳುತ್ತೀಯಾ ? ಮೊದಲೇ ಹೇಳಿಲ್ಲವೇ ನಾನು ಧನ ಮದ, ಕುಲಮದ ಅಂತ ''

''ಮತ್ತೂ ಅದೇ ಪಲ್ಲವಿ. ಬಹಳ ಒಳ್ಳೇ ಹುಡುಗಿ ಅಂದ್ರೆ. ಅಂದು ಬೆಳಗ್ಗೆಯೆಲ್ಲಾ ಆಕೆಯದೇ ತಯಾರಿ. ಸಭ್ಯಸ್ಥ ಹುಡುಗಿ. ಅವಳ ಅತ್ತೇನೆ ಒಪ್ಪಿಕೊಂಡಳಲ್ಲ ಆಕೆಯ ಗುಣಕ್ಕೆ"

"ಹೌದೇ, ಅತ್ತೆ ಒಪ್ಪದಿದ್ದರೆ ಇನ್ನಾರು ಒಪ್ಪಬೇಕು ? ನಾನು ಹೇಳಬೇಕೆಂದರೆ, ನನಗೆ ಈ ಸಂಬಂಧ ಮನಸ್ಸಿಲ್ಲ."

"ರಾಮು ಎಂದಿದ್ದು ಕೇಳಲಿಲ್ಲವೇನು ನಿಮಗೆ ? ಅವನೇ ಮಾಡಿಕೊಳ್ಳುತ್ತೇನೆಂದರೆ, ನಮ್ಮದೇನು ನಡೆದೀತು ? ಸುಖವಾಗಿ ನಡೆದು ಹೋಗಲಿ ಬಿಡಿ." ರಾಯರ ಮನೋವೇದನೆ ಗಳಿಗೆ ಗಳಿಗೆಗೂ ಹೆಚ್ಚುತ್ತಿತ್ತು. ತಮ್ಮ ಮಗ ತಮ್ಮ ಮಾತು ಕೇಳಲಾರದಾದನಲ್ಲಾ ಎಂಬುದು ನಿಮಿಷ ನಿಮಿಷಕ್ಕೂ ಚೇಳು ಕುಟುಕಿದಂತೆ ಆಗುತ್ತಿತ್ತು.

ರಾಮುನ ಮನಸ್ಸು ಇತ್ತ ಕಡೆ ಈ ಯಾವ ಮಾತಿನ ಕಡೆಯೂ ಹೊರಳಿರಲಿಲ್ಲ. ಮಂಜುವಿನ ಮುಖವಷ್ಟೇ ಅವನಿಗೆ ಕಾಣಿಸುತ್ತಿದ್ದುದು. ತಾನೊಬ್ಬ ದೊಡ್ಡ ಧನಿಕನಾದಂತೆಯೇ ಎಂದು ಭಾವಿಸಿಕೊಂಡಿದ್ದ. ಇವರು ಒಪ್ಪಿದರೇನು, ಒಪ್ಪದಿದ್ದರೇನು, ವಿಜಯನೆಂದಂತೆ.

"ನಾವು ಕಾಣೋ ಸಾಯೋ ವರೆಗೂ ಬಾಳ್ವೆ ಮಾಡೋದು. ಅವರೇನು ಇವತ್ತಿದ್ದು ನಾಳೆ ಹೋಗುವವರು. ಕಷ್ಟಸುಖಕ್ಕೇನೂ ಭಾಗಿಯಾಗಲಾರರು"

ಎಂಬುದೇ ನಿಜವಾದಂತೆ ಎನ್ನಿಸಿತು. ಮೇಲಾಗಿ ತನಗೆ ಬೇಕಾಗಿದ್ದುದಾದರೂ ಏನು ? ದುಡಿದರೂ ಉಂಟು. ದುಡಿಯದಿದ್ದರೂ ಉಂಟು ! ಇವರಾರಿಂದ ನನಗೇನಾಗಬೇಕು ಎಂದು ತನ್ನ ಮೊದಲಿನ ಮನಸ್ಸನ್ನೇ ಬದಲಾಯಿಸಿ, ಹೊಸ ಭಾವನೆಗಳಿಗೆಡೆಕೊಟ್ಟಿದ್ದ. ಈ ನೂತನ ಮನೋವಿಚಾರಕ್ಕೆ ವಿಜಯನು ಬಹು ಮಟ್ಟಿಗೆ ಕಾರಣನಾಗಿದ್ದಿರಬೇಕೆಂದು ಹೇಳುವುದು ಅನಾವಶ್ಯಕ.

ಈ ಮಧ್ಯೆ ಶಂಕರಮ್ಮನಿಗೆ ಮತ್ತೊಂದು ಯೋಚನೆ ಹೊಳೆಯಿತು. ಖರ್ಚಿನಲ್ಲಿ ಖರ್ಚು ಆಗಿ ಬಿಡಲಿ. ಸೀತೆಯ ಮದುವೆಯೂ ಆಗಿಬಿಟ್ಟರೆ ಮತ್ತೇನೂ ಯೋಚನೆಯೇ ಇಲ್ಲವಾದೀತು ಎಂದು ಅವರ ಮುಂದಾಲೋಚನೆ. ಜಯರಾಮನದಂತೂ ನಿಶ್ಚಿತವಾಗಿ ಹೋದಂತೆಯೇ. ಜಾತಕ, ಗೋತ್ರ ಹೊಂದಿಸುವದೇನೂ ಅಷ್ಟು ಕಷ್ಟದ ಕೆಲಸವಲ್ಲವಷ್ಟೇ ? ರಾಯರೂ ಊಟಕ್ಕೆ ಕುಳಿತಾಗ ಶಂಕರಮ್ಮ ಏನೋ ಮಾತಾಡುತ್ತಾ ಈ ವಿಷಯವನ್ನು ಎತ್ತಿದರು.

"ಖರ್ಚಿನಲ್ಲಿ ಖರ್ಚು ಆಗೋದು ಆಗಿ ಬಿಡಲಿ. ಸೀತೆಗೆ ವರ ಹುಡುಕೋಣವೇನು ?"

"ಎಲ್ಲಿ ಹುಡುಕೋದೋ ? ನನಗೋ ಸ್ವಲ್ಪವೂ ವಿರಾಮವಿಲ್ಲ ಅತ್ತಿತ್ತ ಅಲೆದಾಡುವುದಕ್ಕೆ ''

"ಮತ್ತೆ ಏನು ಮಾಡಬೇಕೂ ಅಂತ. ಬ್ರಹ್ಮನೇ ಬರಬೇಕೇನು ನಿಮಗೆ?"

"ಇರೋದೇ ಮೂರು ವರ ನೋಡು ನಮಗೆ. ವಿಶ್ವೇಶ್ವರಯ್ಯನವರ ಮಗ ಒಬ್ಬ, ವೆಂಕಟರಾಯರ ಎರಡನೇ ಮಗ, ಸೀತಾರಾಮಯ್ಯನವರ ಕೊನೇ ಹುಡುಗ. ವಿಶ್ವೇಶ್ವರಯ್ಯನವರ ಮಗನಿಗೆ ವಯಸ್ಸೇ ಅರ್ಧ ಕಳೆದು ಹೋದ ಹಾಗಿದೆ. ಇನ್ನುಳಿದ ಎರಡರಲ್ಲೇ ನಾವು ನೋಡಿಕೊಳ್ಳಬೇಕು."

"ವೆಂಕಟರಾಯರ ಮಗ ಏನನ್ನುತ್ತಾನೆ.?''

''ಅವನಿಗೇನು ತಲೆ ಇದೆ ? ಅವರಪ್ಪ ಹೇಳಿದ ಹಾಗೆ ನಡೆಯುತ್ತಾನೆ. ಸೀತಾರಾಮಯ್ಯನವರ ಮಗನೋ ತನಗೆ ಬಿ. ಎ. ಓದಿಸಬೇಕು, ಮೇಲಷ್ಟು ವರದಕ್ಷಿಣೆ ಬೇಕು ಅಂತಾನೆ''

"ಸೀತೆಯನ್ನು ಮೊದಲು ತೋರಿಸುವದಂತೂ ಆಗಲಿ. ಒಪ್ಪಿಗೆ ಬಂದ

ಮೇಲೆ ತಾನೇ ಇತರ ಮಾತುಗಳು !''

''ಹೌದೇ, ಸೀತೆಯ ಮದುವೇನ ನಮ್ಮ ಮನೆ ಮುಂದೆ ನಡೆಸಬೇಕೋ ಬೇಡವೋ ? ಏನು, ಎಲ್ಲವನ್ನೂ ಮುಂಬಯಿಗೆ ತೆಗೆದುಕೊಂಡು ಹೋಗಬೇಕನ್ನುತ್ತೀಯೇನು ?''

"ಹಾಗಾದರೆ ಬೇರೆ ಖರ್ಚು ಮಾಡಿಯೇ ನಿಮ್ಮ ಮನೆ ಮುಂದೆ ಮಾಡಬೇಕೇನು ?"

''ಮತ್ತೆ ಅದು ಮರ್ಯಾದೆಯಲ್ಲವೇನು ? ಇನ್ನೊಬ್ಬರ ಮನೆ ಮುಂದೆ ಮಾಡಲು ನಮಗೆ ಮುಖ ಬೇಡವೇ ? ಹೋಗಲಿ ಬಿಡು ನೋಡೋಣ. ಇನ್ನೂ ಆರು ತಿಂಗಳಿವೆಯಲ್ಲಾ ಲಗ್ನ ಮಾಸಗಳಿಗೆ.''

"ಅದು ಸರಿ, ಸೀತೇನ ತೋರಿಸೋದಂತೂ ಆಗಲಿ. ಸುಮ್ಮನೆ ಮನೆಯಲ್ಲಿಟ್ಟುಕೊಳ್ಳುವುದೇನೂ ನಮಗೆ ಮರ್ಯಾದೆ ತಾರದು."

''ಯಾಕೆ ನಿನಗಷ್ಟು ಅವಸರ ? ಅವಳ ವಯಸ್ಸಾದರೂ ಎಷ್ಟು ? ಇನ್ನೂ ಸುಖವಾಗಿ ಬೆಳೆದುಕೊಳ್ಳಲಿ. ಮುಂದಿನದೆಲ್ಲಾ ಅವರ ಅವರ ಅಣ್ಣಂದಿರಿಗೇ ಸೇರಿದ್ದಲ್ಲವೇ ?''

"ನಮ್ಮ ಮಗಳನ್ನು ನಾವು ನೋಡಬೇಕೋ, ಅವರ ಅಣ್ಣಂದಿರಿಗೆ ಬಿಡಬೇಕೋ ? ಅವು ನೋಡಿದರೆ ಇನ್ನೂ ಹುಡುಗರು. ನಮ್ಮ ಕಣ್ಣ ಮುಂದೆಯೇ ಒಬ್ಬಳೇ ಮಗಳ ಲಗ್ನ ನಡೆದು ಬಿಡಲಿ ಅಂತ ನನ್ನ ಇಷ್ಟ. ಆ ಸೀತಾರಾಮರಾಯರಿಗೊಂದು, ವೆಂಕಟರಾಯರಿಗೊಂದು ಕಾಗದ ಬರೆದು ಬಿಡಿ. ಬಂದು ನೋಡಿ ಕೊಂಡಂತೂ ಹೋಗಲಿ. ಆ ಮೇಲೆ ಮುಂದಿನದು".

ನಾರಾಯಣರಾಯರು ಪತ್ನಿಯ ಮಾತು ಮೀರಲಾರದೇ ಕಾಗದ ಬರೆಯಲೊಪ್ಪಿದರು. ಆದರೆ ಅವರ ಆಸೆಯಂತೂ ಸ್ವಲ್ಪವೂ ವೃದ್ಧಿಯಾಗಲಿಲ್ಲ. ವರದಕ್ಷಿಣೆಯ ವಿಚಾರ ಬಹುಮಟ್ಟಿಗೆ ಕಾಣುತ್ತಿತ್ತು. "ಆಕೆಯೇ ಎಲ್ಲಾ ತಿಳಿದು ಕೊಂಡು ತಲೆ ತಾಕಿಸಿಕೊಳ್ಳಲಿ. ನಾನು ಹೇಳಿದರೆ ತಿಳಿಯುವುದಿಲ್ಲ" ಎಂದು ಸುಮ್ಮನಾದರು. ಶಂಕರಮ್ಮ ರಾಮನ ಮಾತು ತೆಗೆದರು:

"ಅದಿರಲಿ. ರಾಮನನ್ನು ಮುಂಬಯಿಗೆ ಕಳಿಸಿ ಬಿಡಿ; ಅವನನ್ನು ಇಲ್ಲಿ ಇಟ್ಟುಕೊಂಡು ಏನು ಮಾಡುವುದು. ಅಲ್ಲಿ ಹೋಗಿ ಕೆಲಸವನ್ನಾದರೂ ಮಾಡಲಿ''

"ಹೋಗಲಿ. ಯಾರು ಬೇಡ ಅಂದರು ?''

''ಬೇಡ ಅನ್ನುವ ಮಾತಲ್ಲ. ಇಲ್ಲಿದ್ದು ಏನು ಮಾಡಬೇಕೂ ಅಂತ ಅವನೇ ನನಗೆ ಹೇಳಿದ. ಸರೀ ತಾನೆ ಅವನು ಹೇಳೋದು ?"

"ಅದು ಸರಿಯೇ, ಮತ್ತಷ್ಟು ದುಡ್ಡು ಬೇಕಲ್ಲ ಮತ್ತೆ; ಅವನ ಆಫೀಸು ತೆಗೆಯೋಕೆ''

"ಏನೂ ಬೇಡವಂತೆ. ಆದೇ ರಾಜಾರಾಯರ ಮಗ ವಿಜಯನೇ ಸುರು ಮಾಡಿದ್ದಾನಂತೆ. ಕಾಗದ ಬರೆದಿದ್ದಾನೆ. ನಿಮಗೇನೂ ತೊಂದರೆಬೇಡ.'' ನಾರಾಯಣರಾಯರ ಮನಸ್ಸಿಗೆ ಏಕೋ ಬಹು ಕಸಿವಿಸಿಯಾಯಿತು. ತಮ್ಮ ಹಂಗೇ ಬೇಡ ಎನ್ನುವ ಅವನ ಧೂರ್ತತನವನ್ನು ನೋಡಿ ಮಿಡುಕಿದರು. ಬಂದಾಗಿನಿಂದ ಅವನು ಅವರೊಡನೆ ಮಾತಾಡಿಯೇ ಇಲ್ಲ. ಎಲ್ಲವೂ ಶಂಕರಮ್ಮನ ಮೂಲಕವೇ ಬರಬೇಕು.

ರಾಮನ ಮನಸ್ಸಿಗಂತೂ ನೆಮ್ಮದಿಯೇ ಇರಲಿಲ್ಲ. ಇದ್ದಷ್ಟು ಮನೆಯ ಮಮತೆಯನ್ನು ಆಕೆ ಪೂರ್ಣವಾಗಿ ಅಪಹರಿಸಿದಳು. ಯಾವಾಗ ಮುಂಬೈಯಿಗೆ ಹೋದೇನು ಎಂಬುದೇ ಅವನ ಸತತವಾದ ಚಿಂತೆ. ಅವನ ತಂದೆಯ ಮಾತು, ಮನೋಭಾವಗಳನ್ನು ಅರಿತ ಮೇಲೆ ಮತ್ತಷ್ಟು ತಂದೆಯ ಮೇಲೆ ಕುಪಿತನಾದನು. ನಾರಾಯಣರಾಯರು ಇನ್ನೆರಡು ಮೂರು ದಿನಗಳಲ್ಲಿ ಒಪ್ಪಿಗೆ ಕೊಟ್ಟರಂತೂ ಸರಿ. ಇಲ್ಲದಿದ್ದರೆ ತನ್ನಷ್ಟಕ್ಕೆ ತಾನು ಮುಂಬಯಿಗೆ ಹೋಗುವವ ಎಂದು ನಿರ್ಧಾರ ಮಾಡಿ ಬಿಟ್ಟಿದ್ದ. ಸಾಮಾನ್ಯವಾಗಿ ಅವನು ಮನೆಯಲ್ಲೇ ಇರುತ್ತಿರಲಿಲ್ಲ. ಬಂದರೆ ಮುಖವೆಲ್ಲವನ್ನೂ ಉರಿಸಿಕೊಂಡೇ ಇರುತ್ತಿದ್ದ. ಮಾತು ಮಿತ. ಹೆಚ್ಚಾದರೆ ಸಿಡುಕಿನ ಮಾತು. ಶಂಕರಮ್ಮನೇ ಎಲ್ಲವನ್ನೂ ಅರಿತುಕೊಂಡು ಬುದ್ಧಿವಾದ ಹೇಳಲು ಬಂದರೆ, ಅಲ್ಲಿಂದ ಎದ್ದೇ ಹೋಗಿ ಬಿಡುತ್ತಿದ್ದ. ಹೆಚ್ಚೆಂದರೆ "ಹೋ ಹೋ, ನೀವು ಹೇಳುವ ಹೆಣ್ಣನ್ನೇ ಮಾಡಿಕೊಳ್ಳಬೇಕೇನೋ '' ಎಂದು ಗುಡುಗಿ ಬಿಡುತ್ತಿದ್ದ. ರಾಯರಂತೂ ಅವನನ್ನು ಮಾತಾಡಿಸುವ ಹವ್ಯಾಸಕ್ಕೆ ಹೋಗಲಿಲ್ಲ. ರಾಜಾರಾಮನಂತೂ ಮೊದಲಿನಿಂದಲೂ ಅಣ್ಣನ ಸ್ವಭಾವವನ್ನರಿತವನಾದುದರಿಂದ ಎಷ್ಟು ಬೇಕೋ ಅಷ್ಟೇ ಮಾತಾಡುತ್ತಿದ್ದ. ದಾಯಾದಿ ನರಸಿಂಹ ಮತ್ತಷ್ಟು ಒತ್ತಾಸೆಕೊಟ್ಟಿದ್ದ.

"ಲೇ, ರಾಮಾ, ನಿಮ್ಮ ತಂದೆ, ಗದ್ದೆಮನೆ ರಂಗಣ್ಣನವರಿಗೆ ಮಾತು

ಕೊಟ್ಟಿದ್ದಾರಂತೆ ಕಾಣೋ. ಅದಕ್ಕೆ ಈ ಸಂಬಂಧಕ್ಕೇ ಅವರ ಒಪ್ಪಿಗೆ ಇಲ್ಲ." ಅದನ್ನು ಕೇಳಿ ರಾಮನ ಸಿಟ್ಟು ಮತ್ತೂ ಏರುತ್ತಿತ್ತು. ವಾಸ್ತವವಾಗಿ ನಾರಾಯಣರಾಯರು ಇನ್ನೂ ಹೆಣ್ಣುಗಳನ್ನೇ ನೋಡಿರಲಿಲ್ಲ. ಆದರೆ ಒಡಕು ಹುಟ್ಟಿಸಲು ದಾರಿಕಾಯುತ್ತಿದ್ದ ದಾಯಾದಿಗಳಿಗೇನು ? ಒಳ್ಳೆಯ ಮೃಗವೇ ಬಲೆಗೆ ಬಿದ್ದಿತು ಎಂದು ಕೊಂಡು, ಇದ್ದದ್ದು ಇಲ್ಲದ್ದು ಚುಚ್ಚುತ್ತಿದ್ದರು. ರಾಜಾನಿಗೆ ಈ ವಿಷಯವು ಎಂತೋ ಗೊತ್ತಾಗಿ, ನರಸಿಂಹನಿಗೆ ಒಂದು ಸಾರಿ ಹೇಳಿಯೇ ಬಿಟ್ಟ:

"ನರಸಿಂಹ, ನಿನಗೇನೋ ಗ್ರಹಚಾರ ಕಾಣುತ್ತದೆ. ಅಂತೀನಿ ಇನ್ನೇನಾದರೂ ಉಸಿರು ಬಿಟ್ಟಿದ್ದೆಯಾ ಅಂತಾ ಗೊತ್ತಾಗಿಬಿಟ್ಟರೆ, ನಿನ್ನ ಕಾಲು ಮುರಿದು ಕೈಗೆ ಕೊಡುತ್ತೇನೆ, ನೋಡಿಕೋ''. ಇದೂ ರಾಮನ ಕಿವಿಗೆ ಬಿತ್ತು.?"ಹ್ಞೂ ಇವನ ದುರಹಂಕಾರ ಎಷ್ಟು ? ಆ ಕಾಡುಜನ ಕಾಂಗ್ರೆಸ್ಸಿಗರ ಜೊತೆ ಸೇರಿಕೊಂಡು ಪುಂಡರಿಗಿಂತ ಪುಂಡನಾಗಿದ್ದಾನೆ. ನನಗೊಂದಿಷ್ಟು ಸಂದರ್ಭ ಸಿಕ್ಕಲಿ. ಇವನ ಮೂಳೆ ಎಣಿಸಿ ಬಿಡುತ್ತೇನೆ." ಎಂದು ರೇಗಿ ನುಡಿಯುತ್ತಿದ್ದ. ದಾಯಾದಿಗಳಿಗಂತೂ ಹಬ್ಬ. ಇನ್ನೇನು ನಾರಾಯಣರಾಯರ ಮನೆತನ ಮೂರು ಪಾಲಾಯಿತು ಎಂದು ಹಾಯಾಗಿದ್ದರು.

ರಾಯರು ರಾಮನ ಪರಿವರ್ತನೆಯನ್ನು ಅರಿತಿದ್ದರೂ ಶಂಕರಮ್ಮನ ಮುಂದೆ ಬಾಯಿ ಬಿಟ್ಟಿರಲಿಲ್ಲ. ಶಂಕರಮ್ಮನಿಗಂತೂ ಏನೂ ಅರ್ಥವೇ ಆಗಿರಲಿಲ್ಲ. "ಇನ್ನೂ ಹುಡುಗ ವಯಸ್ಸು.'' ಎಂದುಕೊಂಡು ಸುಮ್ಮನಾದಳು. ಆದರೆ ರಾಮನ ಪಿತ್ತ ಪ್ರಕೋಪಕ್ಕೇರುತ್ತಲೇ ಇತ್ತು. ಮುಂಬಯಿಯ ಜ್ಞಾಪಕ ಬಂದಾಗಲಂತೂ ಹುಚ್ಚನಂತಾಗಿ ಬಿಡುತ್ತಿದ್ದ. ರಾತ್ರಿ ಕೆಲವು ವೇಳೆ ನಿದ್ರೆ ಬಾರದೆ ಸುಮ್ಮನೆ ಎದ್ದು ಕುಳಿತುದುದೂ ಉಂಟು. ಈ ವಿಚಿತ್ರ ವರ್ತನೆಯನ್ನು ನೋಡಿ ಶಂಕರಮ್ಮ ಕೊನೆಗೆ ನಿರ್ಧಾರ ಮಾಡಿಬಿಟ್ಟಳು, ರಾಮ ಮುಂಬಯಿಗೆ ಹೋಗಲೇ ಬೇಕೆಂದು.

ಅಂದಿನ ಸಂಜೆ ರಾಯರು ಆಫೀಸಿನ ಕೆಲಸದ ಭಾರದಿಂದ ಸುಸ್ತಾಗಿ ನೊಂದು ಮನೆಗೆ ಬಂದಿದ್ದರು. ಎಂದಿನಂತೆ ಅಂದೇಕೋ ಶಂಕರಮ್ಮ ಕಾಫಿ ಕೊಡಲಿಲ್ಲ. ಅದಿರಲಿ ಮುಖವೇ ಕಾಣದು.

"ಶಂಕರೀ, ಸ್ವಲ್ಪ ಕಾಫಿ ಕೊಡು "ಎಂದು ಕೂಗಿದರು. ಎಲ್ಲಿದ್ದಳೋ ಏನೋ ಒಮ್ಮೆಲೇ ಪ್ರತ್ಯಕ್ಷಳಾದಳು- "ನಿಮ್ಮದನ್ನು ನೋಡಿ ಕೊಳ್ಳಿರಿ ಮೊದಲು. ಇನ್ನುಳಿದವರಿಗೇನಾದರೂ ಆಗಲಿ" ಎಂದು ರೌದ್ರಾವತಾರವನ್ನು ತಾಳಿ ನುಡಿದು ಬಿಟ್ಟಳು. ಇಡೀ ಜೀವನದಲ್ಲೇ ಅವರು ಇಂಥ ಅವತಾರ ವನ್ನು ನೋಡಿರಲಿಲ್ಲ.

"ಯಾರಿಗೆ ಏನಾಗಿದೆಯೇ ? ಸ್ವಲ್ಪ ನಿಧಾನವಾಗಿ ಹೇಳು"

"ಅವೇನು ರಾಮುನಿಗೆ ಹೇಳಿ ಬಿಡಬಾರದೇ ? ಅವನ ಕಷ್ಟ ನೋಡ ಲಾರೆ. ಇನ್ನೆರಡು ವಾರ ಹೋದರೆ ಹುಚ್ಚೇ ಹಿಡಿಯುತ್ತೆ. ಇಲ್ಲಿಯೂ ಕೆಲಸ ವಿಲ್ಲ. ಮುಂಬಯಿಗಾದರೂ ಕೆಲಸಕ್ಕೆ ಬಿಡುವಂತಿಲ್ಲ. ಏನು ಕೊಂಕು ಬುದ್ಧಿಯೇ ನಿಮ್ಮದು" ಎಂದಳು. ಆಗ ರಾಯರಿಗೆ ತಿಳಿವಾಯಿತು.

"ನನ್ನದೇನೇ ಇದೆ.? ಮಹರಾಯನಂತೆ ಹೋಗಲಿ. ಅದಕ್ಕೇನು ? ಅದು ಸರಿ. ಇರುವುದೆಲ್ಲಿ, ಊಟ ಉಪಚಾರ ವಗೈರೆ, ಅದರ ವಿಚಾರ ಮಾಡಿದ್ದಾನಂತೇನು ?"

"ಓಹೋ ನಿಮಗೇ ಇಷ್ಟೇಬುದ್ಧಿ ಇರೋದು. ಅವನ ಮಾವನ ಮನೆಯೇ ಇದೆಯಲ್ಲ ಅಲ್ಲಿ"

"ಇನ್ನೂ ಏನೂ ಇಲ್ಲ ಎಂಥದೂ ಇಲ್ಲ. ಆಗಲೇ ಮಾವನ ಮನೆಯೇ?"

"ಇನ್ನೂ ಏನೇನಾಗಬೇಕು ? ಮದುವೆಯಾಗೋದೆ ನಿಜವಾದರೆ, ಇರೋದರಲ್ಲಿ ಏನು ತೊಂದರೆ ?"

"ಯಾವಾಗ ಹೊರಡುತ್ತಾನೆ"

"ರಾತ್ರಿ ಗಾಡೀಗೇ ಹೋಗುತ್ತಾನಂತೆ"

"ಹೋಗಲಿ. ನಮ್ಮದೇನಿದೆ ಇಲ್ಲಿ"ಎಂದು ಮಾರ್ಮಿಕವಾಗಿ ನುಡಿದರು.

ರಾತ್ರಿಯ ಗಾಡಿಗೆ ರಾಮು ಸತ್ತೆನೋ ಗೆದ್ದೆನೋ ಎಂಬ ಹುರುಪಿನಿಂದ ಓಡಿ ಮುಂಬಯಿಗೆ ತೆರಳಿಬಿಟ್ಟ. ನಾರಾಯಣರಾಯರಿಗಂತೂ ಮುಖವನ್ನೇ ತೋರಿಸಲಿಲ್ಲ. ರಾಯರಿಗೆ ಮನಸ್ಸಿಗೆ ಸ್ವಲ್ಪ ಚುಳುಕ ಎಂದಿತು.ಎಷ್ಟಾದರೂ ಮಗನ ಮೇಲೆ ಮಮತೆ ಎಲ್ಲಿ ಹೋಗಬೇಕು. ರಾಜಾರಾಯರು ಮೀನು ತಿರುಗಿ ಬುಟ್ಟಿಗೆ ಬಿದ್ದಿತೆಂದು ಸಂತೋಷಭರಿತರಾದರು.

ನಾಲ್ಕು ತಿಂಗಳು ಹೇಗೆ ಕಳೆದವೋ ಒಬ್ಬರಿಗೂ ಅರಿವಾಗಲಿಲ್ಲ. ರಾಜಾರಾಯರಾಗಲೇ ಮದುವೆಗೆ ಸರ್ವ ಸಿದ್ಧತೆಗಳನ್ನೂ ನಡೆಸಿದ್ದರು. ದಿಕ್ಕು ದಿಕ್ಕಿಗೂ ವಿವಾಹೋತ್ಸವದ ಪತ್ರಗಳೂ ಹೊರಟವು. ಅವರ ಪ್ರಚಂಡ ಬಳಗ ದಿನದಿನಕ್ಕೂ ಬಂದು ಸೇರುತ್ತಿತ್ತು. ಒಬ್ಬಳೇ ಮಗಳ ಮದುವೆಯನ್ನು ವಿಜೃಂಭಣೆಯಿಂದ ಮಾಡಬೇಡವೆ ? ಆದರೆ ನಾರಾಯಣರಾಯರ ಬಳಗ ಬಹಳ ಚಿಕ್ಕದು. ಅವರ ದಾಯಾದಿಗಳನ್ನೂ ಕರೆದಿದ್ದರು. ಹೆಣ್ಣು ಮಕ್ಕಳು ಮಾತ್ರವಷ್ಟೇ ಬಂದಿದ್ದರು. ರಾವ್ ಬಹದ್ದೂರರ ಮನೆಯ ಮದುವೆ ಎಂದ ಮೇಲೆ ಕೇಳಬೇಕೆ? ಜನ ಕಿಕ್ಕಿರಿದು ಸೇರಿತ್ತು. ನಾರಾಯಣರಾಯರು ನಿಲ್ದಾಣದಲ್ಲಿ ಬಂದಿಳಿದಾಗ ಹೋದ ಸಾರಿ ಬಂದಂತೆ ರಾಜಾರಾಯರಿರಲಿಲ್ಲ. ವಿಜಯ, ರಾಮು ಬಂದಿದ್ದರು. ರಾಮು ಮಾತ್ರ ಯಾರೊಡನೆಯೂ ಮಾತಾಡಲಿಲ್ಲ. ಮೂರನೆಯ ದಿನವೇ ಮತ್ತೆ ಅವರು ಮುಖ ಕಂಡುದುದು. ಎಷ್ಟು ನಾಚಿಕೆ, ಹುಡುಗನಿಗೆ! ಮದುವೆಯಾಗೋದಕ್ಕೆ ಮುಂಚೆ ಎಷ್ಟು ಹುಮ್ಮಸ್ಸು ಇವನಿಗೆ ಎಂದುಕೊಂಡು ಮನಸ್ಸಿನಲ್ಲೇ ನಕ್ಕಳು ಶಂಕರಮ್ಮ. ರಾಯರ ಮನಸ್ಸು ಕುಗ್ಗುತ್ತಿತ್ತು. ರಕ್ತ ಕುದಿದೇಳುತ್ತಿತ್ತು. ಸೀತೆ ಏನು ಮಾಡಿಯಾಳು ?

ಅಂತೂ ಮದುವೆಯೊಂದು ಸಾಂಗವಾಗಿ ನೇರವೇರಿತು. ರಾಯರ ಕಡೆ ರಾವ್‌ಬಹದ್ದೂರರ ಲಕ್ಷ ಕಡಿಮೆಯಾಗುತ್ತಾ ಬಂತು. ರಾಜಾರಾಯರ ಸಂಬಂಧಿಗಳು ಅವರನ್ನು ಕಣ್ಣೆತ್ತಿಕೂಡಾ ನೋಡಲಿಲ್ಲ. ಎಷ್ಟಾದರೂ ಅವರು ಸಿರಿವಂತರು ತಾನೇ? ಇವರನ್ನೆಲ್ಲ ಮಾತಾಡಿಸುವುದೂ ಕೂಡ ತಮ್ಮ ದರ್ಜೆಗೆ ಕೀಳು ! ಅವರ ಹೆಂಗಸರಂತೂ ಶಂಕರಮ್ಮನನ್ನು ಸರಿಯಾಗಿ ಕೂಡಾ ಮಾತಾಡಿಸಲಿಲ್ಲ. ಗಂಗೂ ಒಬ್ಬಳೇ ಹಿಂದಿನ ಪರಿಚಯದ ಮೇಲೆ ಸರಿಯಾಗಿ ಮಾತಾಡುತ್ತಿದ್ದಳು. ಎಲ್ಲರಿಗೂ ಉತ್ತಮವಾದ ಸೀರೆಗಳನ್ನು ಕೊಟ್ಟರೂ, ಶಂಕರಮ್ಮ ಮತ್ತು ಸೀತೆಗೆ ಸ್ಟಾಂಡರ್ಡ ಸೀರೆಗಳೇ ಬಂದವು, "ಅವರ ಸಂತೋಷಕ್ಕೆ ಕೊಟ್ಟದ್ದು ಹೇಗಾದರೂ ಇರಲಿ" ಎಂದು ಶಂಕರಮ್ಮ ಸೀತೆಗೆ ಸಮಾಧಾನ ಮಾಡಿದಳು. ಸೀತೆ ಎಲ್ಲರೆದುರಿಗೆ ಅದನ್ನು ವೇಗವಾಗಿ ತೂರಿಯೇ ಬಿಟ್ಟಳು ! "ಹು, ಎಷ್ಟು ಕೊಬ್ಬು ಇವಕ್ಕೆ. ಇನ್ನೂ ಎಂಥ ಸೀರೆಗಳು ಬೇಕೋ ಇವರಿಗೆ" ಎಂದು ಬಿಟ್ಟಳು ಒಬ್ಬ ಬೀಗಿತಿ! ಇದನ್ನೆಲ್ಲಾ

ಯಾರಿಗೆ ಹೇಳುವುದು ? ರಾಯರು ಮನದಲ್ಲಿ ಉಮ್ಮಳಿಸುತ್ತಿದ್ದರು. ಶಂಕರಮ್ಮನು ಅರ್ಧಕ್ಕರ್ಧ ಒಡವೆಗಳನ್ನು ಮುರಿಸಿ ಸೊಸೆಗೆಂದು ನವೀನ ಮಾದರಿಯ ಬಳೆ, ಓಲೆ ಉಂಗುರ, ಸರ ಮಾಡಿಸಿದ್ದಳು. ಆದರೆ ಅವಿಷ್ಟು ಎಲ್ಲಿದ್ದವೋ ಏನೋ ? ಮಂಜುವಿನ ಕೊರಳಲ್ಲಿಯಂತೂ ಏನೂ ಇರಲಿಲ್ಲ. ಅವರಿಗೇನು ಕಡಿಮೆ ಭಂಗಾರ ಹಾಕುವುದಕ್ಕೆ? ಬರೀ ಮುತ್ತಿನ ಸರಗಳೇ! ಕಿವಿಗೆ ವಜ್ರದ ಒಂದು ಜೊತೆ ಓಲೆ. ಅಳಿಯನ ಕೈಗೊಂದು ಚಿನ್ನದ ಸರಪಳಿಯ ಕೈಗಡಿಯಾರ. ಉಂಗುರವೊಂದು. ಕಂಡ ಕಂಡ ಬಟ್ಟೆಯಲ್ಲಿ ಹೊಲಿಸಿದ ಸರ್ಜ್ ಸೂಟುಗಳು.

"ಆಸ್ತಿಯೇ ನಿನ್ನದಿದ್ದ ಮೇಲೆ ಮತ್ತೇನು ವರದಕ್ಷಿಣೆ" ಎಂದು ರಾಜಾರಾಯರೆಂದ ಮೇಲೆ ಇನ್ನು ಯಾರದೇನು ಹಂಗು ಅವನಿಗೆ! ಪ್ರಪಂಚವೇ ಸ್ವರ್ಗವಾಯಿತು. "ಏನು ಪುಣ್ಯಮಾಡಿದ್ದೆನೋ ಇಂಥ ಮಾವ ಸಿಕ್ಕ ಬೇಕಾದಲ್ಲಿ. ಎಷ್ಟು ಒಳ್ಳೇಯವರು" ಎಂದು ಮನದಲ್ಲಿ ಉಬ್ಬಿ ಉಬ್ಬಿ ಹೀರೇಕಾಯಿಯಾಗಿಬಿಟ್ಟ. ರಾಮು ಸಂಜೆಯ ಆರತಿಯಲ್ಲಿ ಎಲ್ಲರನ್ನೂ ನೋಡಿದ ಸುತ್ತಲೂ. ಆದರೆ ತನ್ನ ಕೆಲವು ಸ್ನೇಹಿತರೇ ಇರಲಿಲ್ಲ. ಸತ್ಯನಂತೂ ಬರುವುದೇ ಇಲ್ಲವೆಂದು ಉತ್ತರ ಬರೆದು ಬಿಟ್ಟಿದ್ದ; ಒಂದು ಮೂಲೆಯಲ್ಲಿ ಕಣ್ಣು ಉಲಿಸುತ್ತಾ ರಾಜಾರಾಮನು ಕೈ ಕಟ್ಟಿಕೊಂಡು ನಿಂತಿದ್ದ. ನಾರಾಯಣರಾಯರು ತಲೆತಗ್ಗಿಸಿಕೊಂಡು ಹೊರಗೆ ನಡೆದರು. ಶಂಕರಮ್ಮ ಗುಂಪಿನಲ್ಲಿ ಎಲ್ಲಿದ್ದಳೋ ಕಾಣಲೇ ಇಲ್ಲ. ಸೀತೆಯ ಮುಖವೂ ಇಲ್ಲ. ರಾಮುನಿಗೆ ಇವರಾರ ಚಿಂತೆಯೇ ಬರಲಿಲ್ಲವೆಂದ ಮೇಲೆ ಏನಾಗಬೇಕಾಗಿದೆ ? ಅವನ ಮನಸ್ಸೆಲ್ಲವೂ ಆಸ್ತಿಯ ಕಡೆಯಷ್ಟೇ ಹೊರಳಿದ್ದರಿಂದ ಪ್ರಪಂಚವೇ ಶೂನ್ಯವಾಯಿತು. ತನ್ನನ್ನೇ ತಾನು ಮರೆತು ಬಿಟ್ಟ.

ಮದುವೆಯ ಗದ್ದಲ ಅಡಗಿತು. ರಾಯರು ಯಾವಾಗ ಊರು ಸೇರಿಯೇನೋ ಎಂದು ಕಾಯುತ್ತಿದ್ದರು. ಶಂಕರಮ್ಮನಿಂದ ಮಾತು ಬರುವವರೆಗೂ ಅವರದೇನೂ ಸಾಗುವಂತಿರಲಿಲ್ಲ. ರಾಜಾರಾಯರೇ ಎಂದು ಬಿಟ್ಟರು: "ಎಂದು ಹೊರಡುವಿರಿ ಊರಿಗೆ ?". ಅಲ್ಲ ಇನ್ನೂ ಬೀಗತನ ಮೂರುದಿನ ಕೂಡಾ ಕಳೆದಿಲ್ಲ. ಏನು ಸೂಕ್ಷ್ಮ ಇವರದು ಎಂದು ರಾಜಾ ಹಲ್ಲು ಕಡಿದ. ಶಂಕರಮ್ಮನ ಕಿವಿಗೆ ಬಿದ್ದಾಗ "ಮತ್ತೆ ಇನ್ನೇನು

ಮಾಡಿಯಾರು ಬಿಡೋ; ದೊಡ್ಡ ಸೈನ್ಯವೇ ಬಂದ ಹಾಗಿದೆ. ” ಎಂದಳು. ರಾತ್ರಿಯೇ ಹೊರಡುವದೆಂದು ನಿರ್ಧರವಾಯಿತು. ರಾಜಾರಾಯರಿಗೂ ಸುದ್ದಿ ಮುಟ್ಟಿತು. ರಾತ್ರಿ ಸಾಮಾನ್ಯವಾದ ಒಂದು ಊಟ ಮಾಡಿಸಿ, ಶಂಕರಮ್ಮ ಸೀತೆಗೆ ಒಂದೊಂದು ಸಿಲ್ಕಿನ, ರಾಯರಿಗೆ ಜರಿ ಪಂಜೆ, ವಲ್ಲಿ, ರಾಜಾನಿಗೆ ಉಂಗುರ, ಜರಿಪಂಜೆ, ಕೊಟ್ಟರು. ರಾಜಾ ಮತ್ತೆ ವಿಜಯನಿಗೆ ತಿರುಗಿ ಕೊಟ್ಟು ಬಿಟ್ಟನು ಎಲ್ಲವನ್ನೂ. ನಾರಾಯಣರಾಯರು ಹೊರಡುವ ಮುನ್ನ ಜಯರಾಮನನ್ನು ನೋಡಬೇಕೆಂದು ಹಂಬಲಿಸಿದರು. ಆದರೆ ಅವನು ಸಿನಿಮಕ್ಕೆ ನಡೆದಿದ್ದನಂತೆ ! ಮಂಜು ಮುಖ ಕೂಡಾ ತೋರಿಸಲಿಲ್ಲ ಸ್ಟೇಶನ್ನಿಗೆ ಕಳುಹಿಸಲು ರಾಜಾರಾಯರೊಬ್ಬರೇ ಬಂದರು.

“ಬಹಳ ಚೆನ್ನಾಗಾಯಿತು.” ಎಂದು ನಟನೆಯ ನುಡಿಗಳನ್ನಾಡಲೇ ಬೇಕಾಯಿತು ನಾರಾಯಣರಾಯರು.

“ ಎಲ್ಲಾ ತಾವು ಮನಸ್ಸು ಮಾಡಿದ್ದಕ್ಕೆ ತಾನೆ ” ಎಂದು ರಾಜಾರಾಯರು ನುಡಿದರು ಅಷ್ಟೇ ಮಾರ್ಮಿಕವಾಗಿ.

ರೈಲು ಅಲ್ಲಿಗೆ ಚಲಿಸಿತು. ಎಲ್ಲರೂ ಕೈಮುಗಿಯುತ್ತ ಕತ್ತಲಲ್ಲಿ ಮರೆಯಾದರು. ರಾಜಾರಾಯರು ಪರಿಹಾರದ ಒಂದು ನಿಟ್ಟುಸಿರನ್ನು ಬಿಟ್ಟು ಮತ್ತೆ ಕಾರನ್ನೇರಿ ಮನೆಗೆ ಮರಳಿದರು. ವಿಜಯು, ರಾಮು, ಮಂಜು ಮೂವರೂ ಖೀರಿನ ಊಟಕ್ಕೆ ರಾಯರ ಹಾದಿಯನ್ನು ಕಾಯುತ್ತಿದ್ದರು. ಬಂದ ಮೇಲೆ ಎಲ್ಲರೂ ನಗೆಯಾಡುತ್ತ ಸಂತೋಷದಿಂದ ಊಟ ಮುಗಿಸಿದರು.

“ನೋಡಿದೆಯೇನೆ, ದೊಡ್ಡವರ ಸಹವಾಸ ಹೇಗಿದೆ” ಎಂದರು ನಾರಾಯಣರಾಯರು.

“ಏನಾಯಿತು ಬಿಡಿ. ಅವರೊಂದು ಸುಖವಾಗಿದ್ದರೆ ಆಯಿತಲ್ಲ. ಜನಗಳ ಧಾಂದಲೆಯಲ್ಲಿ ಯಾರನ್ನು ನೋಡುವುದು, ಯಾರನ್ನು ಮಾತಾಡಿಸುವುದು. ಪಾಪ ಒಬ್ಬರೇ ” ಎಂದು ರಾಜಾರಾಯರಿಗಾಗಿ ಮರುಗಿದಳು.

“ಅದು ಸರಿಯಮ್ಮ. ಅವರು ತೋರಿಸಿದ ಮರ್ಯಾದೆ ನೋಡಿದೆಯಲ್ಲಾ.” ಎಂದು ಸೀತೆ ಮಧ್ಯದಲ್ಲಿ ತಲೆ ಹಾಕಿದಳು.

“ಅವನು ನಮ್ಮ ಕುಲದಿಂದಲೇ ಬೇರೆಯಾದ ಬಿಡಮ್ಮ. ಇನ್ನೇಕೆ ಚಿಂತೆ ಅವನದು’’ ಎಂದು ಕೋಪದಿಂದ ಮುಖ ತಿರುಗಿಸಿದ ರಾಜಾ. ಸ್ವಲ್ಪ

ಹೊತ್ತು ಎಲ್ಲರೂ ಸುಮ್ಮನಿದ್ದರು.

"ಶಂಕರೀ, ಕಂಬಳಿ ಕೊಡು. ಚಳಿಯಾಗುತ್ತಿದೆ" ಎಂದು ನಾರಾಯಣ ರಾಯರು ಕಂಬಳಿ ತೆಗೆದುಕೊಂಡು ಮಲಗಿ ಬಿಟ್ಟರು. ಹುಡುಗರಿಬ್ಬರೂ ಕೂತಲ್ಲೇ ನಿದ್ರೆಗಾರಂಭಿಸಿದ್ದರಿಂದ,ಶಂಕರಮ್ಮಕೂಡಾ ಯಾವ ಉಪಾಯವೂ ಇಲ್ಲದೆ ಮಲಗಬೇಕಾಯಿತು. ರಾತ್ರಿಯೆಲ್ಲಾ ಆಕೆಗೆ ಕನಸುಗಳು. ರಾಮ ನಿಗೆ ಗಂಡುಮಗುವಾದಂತೆ, ತನ್ನ ತೊಡೆಯ ಮೇಲೆ ಅದು ನಕ್ಕಂತೆ, ಸೀತೆಯ ಮದುವೆ, ಇನ್ನೂ ಏನೇನೋ ಬರೀ ಕನಸುಗಳೇ ತುಂಬಿದ್ದವು ಆಕೆಯ ನಿದ್ದೆಯ ತುಂಬಾ. ಕಣ್ಣುಬಿಟ್ಟಾಗ ಬೆಳಗಾಗಿತ್ತು.

ಮನೆಗೆ ಬಂದ ಮೇಲೂ ಕೂಡಾ ಮದುವೆಯ ವಿಚಾರವೇ. ಬೇರೆ ಮಾತುಕತೆಯೇ ಬರಲಿಲ್ಲ. ಎಲ್ಲವನ್ನೂ ಕಣ್ಣಾರೆ ಕಂಡಿದ್ದ ದಾಯಾದಿಗಳ ಮನೆಯವರು ನೋಡಿ ನೋಡಿ ಕೈ ತೋರಿಸಿ ನಗುತ್ತಿದ್ದರು. ನಾರಾಯಣ ರಾಯರಲ್ಲಿದ್ದ ಆ ಹುಮ್ಮಸು, ಉತ್ಸಾಹ, ದೊಡ್ಡಸ್ತಿಕೆ ಇದ್ದಕ್ಕಿದ್ದಂತೆಯೇ ಮಾಯವಾದುವು. ಒಂದು ದಿನವಂತೂ ಕಛೇರಿಗೆಂದು ಹೊರಟವರು ಏನೋ ಯೋಚನೆ ಮಾಡುತ್ತಾ ಕೆರೆಯಾಚೆ ದಾಟಿ ಮೂರು ಮೈಲು ಬಂದಿದ್ದರು. ಆ ಮೇಲೆ ತಲೆಯೆತ್ತಿ ನೋಡಿದಾಗಲೇ ಅವರಿಗೆ ಎಚ್ಚರ. ಶಂಕರಮ್ಮನೂ ಹೆಚ್ಚು ಮಾತಾಡುತ್ತಿರಲಿಲ್ಲ. ಏನು ಮಾತುಕತೆ ನಡೆದರೂ ರಾಜ, ಸೀತೆ ಇಬ್ಬರದೇ.

ಇತ್ತ ರಾವ್ ಬಹದ್ದೂರರ ಮನೆಯಲ್ಲಿ ಮದುವೆಯಾದ ಎಂಟು ದಿನ ಗಳವರೆಗೂ ನಡೆದೇ ಇತ್ತು ಊಟ ಉಪಚಾರದ ಸಂಭ್ರಮ. ಅವರಬೇಸು ಬಳಗ ಕಡಿಮೆಯೇ, ಸ್ನೇಹಿತರೂ ಕಡಿಮೆಯೇ? ರಾಮು, ವಿಜಯ, ಮಂಜು ಯಾವಾಗಲೂ ಜೊತೆ. ಎಲಿಫಾಂಟ್ ದ್ವೀಪಕ್ಕೊಂದು ದಿನ. ಲೋನಾ ವಾಲಾ, ಕಲ್ಲ ಕಡೆಗೆರಡು ದಿನ, ಕುದುರೆ ಜೂಜು, ನಾಟಕ ನೃತ್ಯ ಇವುಗ ಳಂತೂ ಅವಿರತವಾಗಿ ನಡೆದಿದ್ದವು. ಮದುವೆಗೆ ಬಂದಿದ್ದ ಬೀಗರೆಲ್ಲರೂ ದಿನ ದಿನಕ್ಕೂ ಚದರಲಾರಂಭಿಸಿದರು. ರಾಯರಿಗೆ ನಿರಾಳವಾಗಿ ಉಸಿರುಬಿಡು ವಂತಾಯಿತು.

ಒಂದು ದಿನ ರಾವ್‌ಬಹದ್ದೂರರು ಉಡುಗೊರೆ ಬಂದಿದ್ದ ವಸ್ತುಗಳೆಲ್ಲ ವನ್ನೂ ನೋಡುತ್ತಿದ್ದರು. ಆದರೆ ಗವರ್ನರರು ಕೊಟ್ಟಿದ್ದ ಬೆಳ್ಳಿಯ ತಟ್ಟೆ

ಯೊಂದು ಗೈರಾಗಿತ್ತು ರಾಯರು ಮನೆಯಲ್ಲಿ. ಎಲ್ಲರನ್ನೂ ವಿಚಾರಿಸಿದರು. ತಮ್ಮ ಬಂಧುಗಳಿಗೆ ದಿಕ್ಕಿ ದಿಕ್ಕಿಗೂ ಕಾಗದ ಬರೆಸಿದರು. ಮನೆಯಲ್ಲಿ ಕೋಣೆ ಮೂಲೆ, ಹಿಂದಿನ ಭಾವಿ, ಮುಂದಿನ ಕೊಳ ಎಲ್ಲವನ್ನು ಹುಡುಕಿಸಿದರು. ಗವರ್ನರರು ಕೊಟ್ಟ ತಟ್ಟೆಯಲ್ಲವೇ ?ವಿಜಯನಿಗೆ ಮತ್ತೊಂದು ಯೋಚನೆ ಬಂದಿತು. "ನಾರಾಯಣರಾಯರಿಗೊಂದು ಕಾಗದ ಬರೆಯಿರಿ ನೋಡೋಣ" ಎಂದೇ ಬಿಟ್ಟನು. ನಾಯರೂ ಧೈರ್ಯ ಮಾಡಿ ಕಾಗದ ಬರೆದರು.

ಕಾಗದ ಬಂದಾಗ ನಾರಾಯಣರಾಯರು ದಿಗ್ಭ್ರಾಂತರಾದರು. ಮೈ ಬೆವರಿ ಬಾಯಿ ಒಣಗಿತು. "ಇದು ಏನು ಗ್ರಹಚಾರನಪ್ಪಾ ನಮಗೆ ದೇವರೇ. ತಪ್ಪಿಸಿಕೊಂಡು ಬಂದು ಹಾಯಾಗಿರೋಣವೆಂದರೆ ಅದೂ ಆಗಲಾರದೆ? ನಮ ಗೇಕೆ ಬೇಕಿತ್ತು ಆ ತಟ್ಟೆ ? ಅದೂ ಹೀಗೆ ತರುವುದೇ"? ಎಂದು ಶಂಕರಮ್ಮ ನೊಡನೆ ವಿಚಾರಿಸಿದರು. "ಛೀ ಎಲ್ಲಾದರೂ ಉಂಟೇ ? ನಾವು ಬಂದಿದ್ದೇ ಮುಂಚೆ, ನಮ್ಮ ಸಾಮಾನಿನಲ್ಲಿ ಬಂದಿರಲಾರದು. '' ಎಂದರು. "ಇಲ್ಲಿ ನೋಡು ಇನ್ನೊಮ್ಮೆ ಟ್ರಂಕನ್ನು. ನಮ್ಮ ಗ್ರಹಚಾರ ಕಾಣುತ್ತಿದ್ದರೆ ಯಾರು ಏನು ಮಾಡಲಾದೀತು'' ಎಂದರು. "ಇಲ್ಲಾ ಅಂದ್ರೆ. ಸುಮ್ಮನೆ ಯಾಕೆ ಪೇಚಾಡುತ್ತೀರಿ" ಎಂದು ಶಂಕರಮ್ಮನವರು ಉತ್ತರವಿತ್ತರು.

"ನನಗೆ ಅದೆಲ್ಲಾ ಬೇಡಾ. ನಮಗೆ ಕಾಗದ ಬರೆಯಬೇಕಾದಲ್ಲಿ ಅನು ಮಾನ ಪಟ್ಟೇ ಬರೆದಿದ್ದಾರೆ. ಅವರಿದ್ದವರು. ನಾವು ಇಲ್ಲದವರು. ನಮ್ಮ ಮೇಲೆ ಗುಮಾನಿ ಬರಲು ಸಾಧ್ಯವಿದೆ. ಅವರ ಬಂಧುಗಳಿಗೆ ಏನೂ ಅವರ ವಿಚಾರ ತಿಳಿಸಲಾರರು'' ಎಂದು ಶಂಕರಮ್ಮನ ಕೈಯಲ್ಲಿದ್ದ ಬೀಗದ ಕೈಯ್ಯನ್ನು ರಭಸವಾಗಿ ಕಿತ್ತುಕೊಂಡು ಕೋಣೆಯಲ್ಲಿನ ಪೆಟ್ಟಿಗೆಗಳನ್ನು ತಡವಲು ಹೊರಟರು. ಶಂಕರಮ್ಮನೂ ಹಿಂಬಾಲಿಸಿದಳು. ರಾಜ, ಸೀತೆಯೂ ಒಳಹೊಕ್ಕರು,

ಮೊದಲು ಸೀತೆಯ ಪೆಟ್ಟಿಗೆಯ ಶೋಧನೆ ನಡೆಯಿತು. ಅದರಲ್ಲಿ ಏನೂ ಸಿಕ್ಕಲಿಲ್ಲ. ರಾಜನ ಪೆಟ್ಟಿಗೆಯ ಸರದಿ ಬಂತು. ಎಲ್ಲ ಬಟ್ಟೆಗಳನ್ನು ಕಿತ್ತು ಎಸೆದಾಗ ಕೆಳಗಡೆ ನೋಡುತ್ತಾರೆ— ಬೆಳ್ಳಿಯ ಎತ್ತರವಾದ ತಟ್ಟೆ ! ಶಂಕರಮ್ಮನ ಎದೆ ಧಸಕ್ಕೆಂದಿತು. ರಾಜನಂತೂ ನೆಲಕ್ಕೆ ಕುಗ್ಗಿ ಹೋದ. ಎಲ್ಲಿಂದ ಬಂತು ತಟ್ಟೆ? ನಾನು ಅದನ್ನು ನೋಡಿಯೇ ಇಲ್ಲವಲ್ಲ ಎಂದು

ರಾಜನಿಗೆ ಯೋಚನೆ ಹತ್ತಿತು. ನಾರಾಯಣರಾಯರು ಹಲ್ಲು ಕಡಿದರು.

"ರಾಜಾ, ಯಾವಾಗ ಕಲಿತೆ ಈ ವಿದ್ಯೆಯನ್ನು ?"

"ನನಗೆ ಅದರ ವಿಚಾರವೇ ಗೊತ್ತಿಲ್ಲವಪ್ಪ''

"ಹೇಗೆ ಗೊತ್ತಾದೀತು? ಕದ್ದು ಇಷ್ಟು ದಿನ ಇಟ್ಟು, ಕಾಗದ ಬರಸಿಕೊಂಡು, ಯಾರ ಮಾನ ತೆಗೆಯಬೇಕೆಂದಿದ್ದೀಯೆ. ಕುಲಘಾತಕಾ'' ಎಂದು ಬಲವಾಗಿ ಕೆನ್ನೆಗೊಂದು ಬಿಗಿದರು. ಶಂಕರಮ್ಮ ಜೀವಮಾನದಲ್ಲೇ ಇಷ್ಟು ಸಿಟ್ಟು ನಾರಾಯಣರಾಯರಿಗೆ ಬಂದಿದ್ದನ್ನು ನೋಡಿರಲಿಲ್ಲ. ಸಮಾಧಾನ ಮಾಡುವ ಧೈರ್ಯವೇ ಇರಲಿಲ್ಲ. ಸೀತೆ ತನ್ನನ್ನೇ ತಾನು ಮರೆತು ಬಿಟ್ಟಿದ್ದಳು.

ನಾರಾಯಣರಾಯರು ತಲೆಯ ಮೇಲೆ ಕೈ ಹೊತ್ತು ಕುಳಿತರು.

ರಾಜ ಅಲ್ಲಿಂದ ಬಿರಬಿರನೆ ಹೊರಟೇ ಹೋದ. ಶಂಕರಮ್ಮ ಎಷ್ಟು ಕೂಗಿದರೂ ತಿರುಗಿ ನೋಡಲಿಲ್ಲ. "ಹೋದರೆ ಹೋಗಲಿ. ನನ್ನ ಮಗನೇ ಅಲ್ಲ. ತಿರುಗಿ ಬಾರದಂತೆಯೇ ಹೋಗಲಿ" ಎಂದರು ನಾರಾಯಣರಾಯರು. ರಾಜನಿಗೆ ಈ ಕೊನೆಯ ಶಬ್ದಗಳು ಚೆನ್ನಾಗಿ ಕೇಳಿದವು. ಅವನ ಹೆಜ್ಜೆ ಮತ್ತೂ ಬಿರುಸಾಗಿ ನಿಮಿಷ ಮಾತ್ರದಲ್ಲಿ ಮರೆಯಾಗಿಬಿಟ್ಟ.

"ಶಂಕರೀ, ನಾಲ್ಕು ಜನದ ಮುಂದೆ ಕಳ್ಳರಾದೆವು. ಆಯಿತು. ನಮ್ಮ ಮರ್ಯಾದೆ, ಕುಲ, ದೊಡ್ಡಸ್ತಿಕೆ ಎಲ್ಲಾ ಮುಗಿಯಿತು. ಅಯ್ಯೋ" ಎಂದು ಅಳಲಾರಂಭಿಸಿದರು. ಶಂಕರಮ್ಮನಿಗೆ ಎದೆಯೇ ಬಾಯಿಗೆ ಬಂತು. ಮಾತನಾಡಲಾರಳು. ಸೀತೆಯೆಂದಳು:

"ಅಪ್ಪಾ, ರಾಜ ಈ ಕೆಲಸ ಮಾಡಿರಲಿಕ್ಕಿಲ್ಲ. ಸುಮ್ಮನೆ ಏಕೆ ಹೊಡೆದೆ?"

"ಹೇಗೆ ಬಂತು ಅದು ಇಲ್ಲಿ?''

"ಇನ್ನಾರೋ ಕುಯುಕ್ತಿ ಮಾಡಿರಬಹುದು ''

''ನೀನೂ ಸೇರಿದ್ದೆಯೋ ಅದರಲ್ಲಿ" ಎಂದು ಕಣ್ಣು ಕೆಂಪಗೆ ಮಾಡಿದರು.

''ಅಪ್ಪಾ, ಹಾಗೆಲ್ಲಾ ಮಾತಾಡಬಾರದು. ಏನು ಹಾಗೆಂದರೆ" ಎಂದು ಅವಳೂ ಕೋಪಿಸಿದಳು. ಶಂಕರಮ್ಮನೇ ''ಏ ಹುಚ್ಚಿ, ಏನು ಮಾತು ನಿನ್ನದು'' ಎಂದು ಗದರಿಸಿ ಸಮಾಧಾನ ಮಾಡಿದಳು. ಈ ತಟ್ಟಿ

ಯನ್ನು ಯಾವ ಮುಖದಿಂದ ಕಳುಹಿಸಬೇಕೆಂಬುವೇ ನಾರಾಯಣರಾಯರ ಸಮಸ್ಯೆಯಾಯಿತು. "ಆಯಿತು. ನಮಗಿನ್ನು ಉಳಿಗಾಲವಿಲ್ಲ'' ಎಂದು ತಾವೇ ಸ್ವತಃ ಮುಂಬಯಿಗೆ ಹೋದರು.

ಅಕಸ್ಮಾತ್ತಾಗಿ ನಾರಾಯಣರಾಯರು ಬಂದಿದ್ದನ್ನು ನೋಡಿ ರಾಜಾ ರಾಯರು ತಮ್ಮ ಪತ್ರ ಅನೌಚಿತ್ಯವೆಂದು ತಿಳಿದರು. ಆದರೆ ಹತ್ತಿರ ಬಂದಾಗ ಅವರ ಮುಖ ನೋಡಿದಾಗ ಏನೂ ಹೇಳಲು ತೋರದಿದ್ದವರಂತೆ ಇದ್ದರು. ''ರಾಜಾರಾಯರೆ, ಇದೋ ನಿಮ್ಮ ತಟ್ಟೆ'' ಎಂದು ಮುಂದೆ ನೀಡಿದರು. ರಾಜಾರಾಯರಿಗೆ ಕಣ್ಣು ನಂಬಲಾರದಷ್ಟು ಸೋಜಿಗ. ''ನಮ್ಮ ರಾಜನದು ಕೆಲಸ. ಅವನ ಮೇಲೆ ನೀವು ಏನು ಬೇಕಾದರೂ ಮಾಡಿಕೊಳ್ಳಿ. ನನ್ನದೇನೂ ಇಲ್ಲ. ಕ್ಷಮಿಸಿ, ರಾಜಾರಾಯರೇ '' ಎಂದು ಕಣ್ಣು ತುಂಬ ನೀರು ತಂದರು. ರಾಜಾರಾಯರಂತಹ ಕಾಠಿಣ್ಯ ವುಳ್ಳವರಿಗೂ ಸ್ವಲ್ಪ ಕಾರುಣ್ಯ ಉಕ್ಕಿತು. ''ಬೇಡ ರಾಯರೆ, ಕೂತು ಕೊಳ್ಳಿ. ಏನೋ ತಪ್ಪಿ ತೆಗೆದುಕೊಂಡು ಹೋಗಿರಬಹುದಷ್ಟೇ. ಅದಕ್ಕೇಕೆ ಅಷ್ಟು ತೊಂದರೆ '' ಎಂದರು. ''ತಪ್ಪಿನಿಂದಲ್ಲದೆ ರಾಯರೆ, ಏತರಿಂದಾ ದರೂ ಅವನು ಮಾಡಿದುದು ತಪ್ಪು', ಎಂದು ಹೇಳಿ ''ಬರುತ್ತೇನೆ.'' ಎಂದು ಕೈಮುಗಿದು ತಿರುಗಿ ಸುಂಟರಗಾಳಿಯಂತೆ ಹೊರಬಿದ್ದರು. ರಾಜಾ ರಾಯರ ಹಿಂದೆಯೇ ನಿಂತಿದ್ದ ವಿಜಯ ನಕ್ಕು ನುಡಿದ. '' ಬಡತನವಿದ್ದರೆ ಬೇಡಿ ತೆಗೆದುಕೊಳ್ಳಲಿ. ಕದಿವುದೇ ? ಕೇಳಿದ್ದರೆ ನಾನು ಇನ್ನೂ ಒಂದು ತಟ್ಟೆ ಕೊಡಲಾರೆನೇ " ಎಂದು ಹಲ್ಲು ಕಡಿದ. ರಾಮನಿಗೆ ಬಾಯಿಯೇ ಹೋಗಿ ಬಿಟ್ಟಿತ್ತು. ರಾಜನ ಮೇಲೆ ಕೋಪ ಮತ್ತೂ ಉಗ್ರವಾಯಿತು. ಮಂಜುಳೆ ನಗುತ್ತಿದ್ದಳು. ರಾಜಾರಾಯರು ಏನೂ ಮಾತಾಡಲಾರದೆ ಸುಮ್ಮನೇ ಕುಳಿತಿದ್ದರು ಗದ್ದಕ್ಕೆ ಕೈ ಕೊಟ್ಟು.

ನಾರಾಯಣರಾಯರು ಊರಿಗೆ ತಿರುಗಿ ಬಂದಿದ್ದರೂ ರಾಜನಿನ್ನೂ ಬಂದೇ ಇರಲಿಲ್ಲ. ''ಪುಣೆಯಲ್ಲಿ ಶಾಮಾಶಾಸ್ತ್ರಿಗಳು ನೋಡಿದರಂತೆ'' ಎಂದು ಶಂಕರಮ್ಮನೆಂದಳು. ನಾರಾಯಣರಾಯರಿಗೆ ಯಾವುದೂ ಬೇಕಾ ಗಿರಲಿಲ್ಲ. ಅರೆಹುಚ್ಚರಂತಾಗಿದ್ದರವರು.

''ಎಲ್ಲಿದ್ದರೇನಂತೆ ? ಅವನು ನಮಗೇನಾಗಬೇಕು'' ಎಂದರು. ಸರಿ

ಯಾಗಿ ಊಟವನ್ನು ಸಹ ಮಾಡಲಿಲ್ಲ. ಚಳಿಯಾಗುತ್ತಿಯಿದೆಂದು ಸುಮ್ಮನೇ ಹೊದ್ದು ಮಲಗಿಬಿಟ್ಟರು. ಜ್ವರವೂ ಏರುತ್ತಿದ್ದವು. ಶಂಕರಮ್ಮ ಒಳಕ್ಕೆ ಹೋಗಿ ದೇವರ ಮುಂದೆ ಕೈ ಮುಗಿದು ತಾಳಿಯನ್ನೊಮ್ಮೆ ಮುಟ್ಟಿಕೊಂಡಳು. ಮನೆಯ ವಾತಾವರಣವೇ ಕಳೆದು ಹೋಗಿತ್ತು. ''ಕಾಫಿ ಕಾಸಿ ಕೊಡಲೇ'' ಎಂದು ಶಂಕರಮ್ಮ ಕೇಳಿದರೆ, ಒಂದೇ ಸಾರಿಗೆ ರೇಗಿ ''ನೀನು ಮಾತಾಡ ಬೇಡವೇ'' ಎಂದುಬಿಡುತ್ತಿದ್ದರು. ಸೀತೆಯೇ ಎಲ್ಲವನ್ನೂ ಮನವೊಪ್ಪಿ ಮಾಡುತ್ತಿದ್ದಳು. ಯಾವಾಗಲಾದರೂ ಒಮ್ಮೊಮ್ಮೆ "ರಾಜ, ಮತ್ತೆ ಬರಬೇಡ, ತಿಳಿಯಿತೋ" ಎನ್ನುವರು- ಇನ್ನೊಮ್ಮೆ "ಜಯರಾಮ, ಯಾವ ಜಯರಾಮ" ಎಂದು ತಮ್ಮೊಡನೆ ತಾವು ಮಾತಾಡಿಕೊಳ್ಳುವರು. ಜ್ವರದ ತಾಪಕ್ಕೆ ಸಾಕಾಗಿ "ಸಾಕುಮಾಡಪ್ಪಾ ದೇವರೇ" ಎನ್ನುವರು. ಸೀತೆಯೇ ''ಅಪ್ಪಾ, ಏಕೆ ಹಾಗೆ ಮಾಡುತ್ತೀಯ. ನೀನು ಹಾಗೆಲ್ಲಾ ಮಾತಾಡಿದರೆ ನಮಗೆ ಹೆದರಿಕೆಯಾಗು ತ್ತದೆ.'' ಎಂದರೆ ''ಹೆದರಿಕೆಯಾಗಲು ನಾನೇನು ದೆವ್ವವೇ, ಭೂತವೇ'' ಎನ್ನುವರು. ಮಾತನಾಡದೆ ಇರುವುದೇ ಲೇಸೆಂದು ಶಂಕರಮ್ಮ, ಸೀತೆ ಇಬ್ಬರೂ ಸುಮ್ಮನಿರುತ್ತಿದ್ದರು.

ರಾಯರು ಜ್ವರದ ತಾಪದಿಂದ ದಿನೇ ದಿನೇ ಇಳಿಯುತ್ತಿದ್ದರು. ಸರಿ ಯಾಗಿ ಗಂಜಿ, ಹಾಲು, ಕಾಫೀ ಯಾವುದನ್ನೂ ಕುಡಿಯುತ್ತಿರಲಿಲ್ಲ. ಒಂದೊಂದು ಸಾರಿ ತಂಬಿಗೆಯಷ್ಟು ನೀರನ್ನೇ ಕುಡಿದುಬಿಡುತ್ತಿದ್ದರು. ''ಅಪ್ಪಾ ರಾಮನಿಗೆ ಕಾಗದ ಬರೆಯೋಣವೇ. ಮನೆಯಲ್ಲಿ ಯಾರೂ ಗಂಡ ಸರಿಲ್ಲ.'' ಎಂದು ಸೀತೆ ಬಂದು ಕೇಳುವಳು. ರಾಯರು ಒಂದೇ ಸಾರಿಗೆ ರೇಗಿ ನುಡಿದರು. ''ಕಾಗದ ಬರೆದರೆ ಕೈಯನ್ನೇ ಸುಟ್ಟು ಬಿಡುತ್ತೇನೆ. ಮನೆಯಲ್ಲಿ ನನ್ನನ್ನು ಬಿಟ್ಟು ಮತ್ತಾವ ಗಂಡಸು ಬೇಕು ನಿಮಗೆ.'' ಎಂದು ಬಿಟ್ಟರು. ಸೀತೆ ತಣ್ಣಗಾದಳು.

ನಾರಾಯಣರಾಯರು ದಿನೇ ದಿನೇ ಕ್ಷೀಣಿಸುತ್ತಿದ್ದರೂ, ಸಂಸಾರದ ಆಸ್ಥೆ ಮಾತ್ರ ಕಡಿಮೆಯಾಗಿರಲಿಲ್ಲ. ರಾಜಾರಾಮನ ವಿಯೋಗದಿಂದ ಮತ್ತಷ್ಟೂ ಸಂತಪ್ತರಾದರು. ಅದನ್ನು ಪ್ರೇರಿಸುವಂತೆ ದಿನಕ್ಕೊಮ್ಮೆಯಾ ದರೂ ಶಂಕರಮ್ಮ ಅವನನ್ನು ನೆನಸಿಕೊಳ್ಳುತ್ತಿದ್ದರು. ರಾಯರ ಸಹೋ ದ್ಯೋಗಿಗಳೂ, ಬಾಲ್ಯ ಸ್ನೇಹಿತರೂ ಆದ ಸುಬ್ಬರಾಯರು, ಲಕ್ಷ್ಮಣರಾ

ಯರು, ಇವರುಗಳ ಪ್ರೇರಣೆ ಪ್ರಭಾವಗಳಿಗೆ ಸಿಲುಕಿ ಕೆಲವು ವಧೂ ಅನ್ವೇಷಕರು ಸೀತೆಯನ್ನು ನೋಡಲು ಬರುತ್ತಿದ್ದರು. ಎಲ್ಲವನ್ನೂ ಸುಬ್ಬರಾಯರು, ಕೃಷ್ಣರಾಯರು, ಲಕ್ಷ್ಮಣರಾಯರು ಇವರುಗಳೇ ನೋಡಿಕೊಳ್ಳುತ್ತಿದ್ದರು. ''ಲಕ್ಷ್ಮಣಾ, ಏನು ಪುಣ್ಯ ಮಾಡಿದ್ದೆನೋ ಕಾಣೆ ನಾನು ಹಿಂದಿನ ಜನ್ಮದಲ್ಲಿ ಇಂಥಾ ಸ್ನೇಹಿತರನ್ನು ಕಾಣಲು'' ಎಂದು ನಾರಾಯಣರಾಯರು ಹೇಳುತ್ತಿದ್ದರು. ''ಮನೆಯವರಿಗಿಂತಲೂ ಹೆಚ್ಚುನೋಡಿಕೊಳುತ್ತೀರಪ್ಪ— ಅಣ್ಣಂದಿರ ಹಾಗಿದ್ದೀರಿ''ಎಂದು ಶಂಕರಮ್ಮನೂ ಕೃತಜ್ಞತೆ ಅರ್ಪಿಸುತ್ತಿದ್ದಳು. ಲಕ್ಷ್ಮಣರಾಯರು ಇದರಿಂದ ಉಬ್ಬದೆ, ''ಏನು ದೊಡ್ಡದು ನಾರಾಯಣ, ಇಂಥಾ ಕೆಲಸಮಾಡುವುದು ? ನನಗಂತೂ ದೇವರು ಮಕ್ಕಳ ಭಾಗ್ಯ ಕೊಡಲಿಲ್ಲ. ಮಕ್ಕಳಿದ್ದವರಿಗಾದರೂ ಸೇವೆ ಮಾಡ ಬೇಡವೇ'' ಎಂದು ನಿಟ್ಟುಸಿರು ಬಿಡುತ್ತಿದ್ದರು.

ಆದರೆ ಸೀತೆಗೆ ಮಾತ್ರ ಇತ್ತೀಚಿಗೆ ಈ ವಿಷಯಗಳಿಂದ ಉದ್ವಿಗ್ನತೆ ಬಂದಿತ್ತು. "ಏನು ನಾನು ಆಫ್ರಿಕದ ಘೇಂಡಾ ಮೃಗವೇನು ಬಂದು ಬಂದು ನೋಡಿ ಹೋಗಲಿಕ್ಕೆ ? ಇವರು ನಮ್ಮನ್ನು ಒಪ್ಪಬೇಕು. ಅವರನ್ನು ನಾವು ಒಪ್ಪಿದರೆಷ್ಟು ಬಿಟ್ಟರೆಷ್ಟು ? ಎಲ್ಲ ಮನ್ಮಥರೂಪಗಳೇ! ಪೆಡಂಭೂತಗಳು!" ಎಂದು ಮನಸ್ಸಿನಲ್ಲಿ ಕುದಿದೇಳುತ್ತಿದ್ದಳು. "ಸುಮ್ಮನೆ ಒಬ್ಬಂಟಿಗಳಾಗಿರುವುದು ಮೇಲು'' ಎಂಬ ಭಾವನೆ ಬಹಳವಾಯಿತು ಆಕೆಗೆ. ಒಂದು ದಿನ ಮಾತನಾಡುತ್ತಾ ತಾಯಿಯ ಮುಂದೆ ಬಾಯಿಬಿಟ್ಟಳು ಸೀತೆ."ಅಮ್ಮಾ, ಮಹಾಲಕ್ಷ್ಮೀ ಮಿಡ್ಲ್ ಸ್ಕೂಲಿನಲ್ಲಿ ಮೇಡಂ ಆಗಿ ಸೇರಿಕೊಳ್ಳುತ್ತೇನೆ.ಮದುವೆ ಬೇಡವೇ ಬೇಡ." ಶಂಕರಮ್ಮನಿಗೆ ಕರುಳಿರಿಯಿತು. ಇದ್ದ ಒಬ್ಬ ಮಗಳ ಮದುವೆ ಮಾಡದಿದ್ದರೆ ಹೇಗೆ? ಏನೇನು ಆಸೆ, ನಂಬಿಕೆಗಳನ್ನಿಟ್ಟಿದ್ದರವರು ? ಎಲ್ಲವೂ ಮಣ್ಣು ಪಾಲು! ಕಣ್ಣಲ್ಲಿ ನೀರು ಬಂದರೂ ಅದನ್ನು ತಡೆದು ಕೊಳ್ಳುತ್ತ"ಹಾಗೆಂದರೇನೆ ಮಗು?ಇಲ್ಲ ಸಲ್ಲದ ಅಪವಾದ ಬಂದೀತು. ನೀನೇ ನೋಡಿದ್ದೀಯಲ್ಲಾ ಆ ವೆಂಕಟಸುಬ್ಬಮ್ಮನ ಸ್ಥಿತೀನ" ಎಂದರು.

"ಅಪವಾದ ಬಂದರೇನಂತೆ ಮಹಾ ? ಜನರ ಬಾಯಿಗೆ ಬೀಗ ಹಾಕಲಾದೀತೆ ?"

"ಹಾಗಲ್ಲ ಕಣೇ ಹುಚ್ಚಮ್ಮ. ಉಪ್ಪು ಹುಳಿ ಕಾರ ತಿಂದ ವೈ

ಕಡೆಯಲಾರವಮ್ಮ ಅಂಥದ್ದನ್ನು. ನಿನಗೆ ತಿಳಿಯದು. ತಡವಾದರೇನಂತೆ ಚಿಂತೆಯಿಲ್ಲ. ನಿಮ್ಮ ತಂದೆಗಿಂಲೂ ಹೆಚ್ಚಾಗಿ ಸುಬ್ಬರಾಯರು, ಲಕ್ಷ್ಮಣ ರಾಯರು ಓಡಾಡುತ್ತಿದ್ದಾರೆ. ವರನಿಗೆ ನಿನ್ನ ಅದೃಷ್ಟ ಗಟ್ಟಿರಲಿ. ಹಾಗೆಲ್ಲಾ ಮಾತಾಡ ಬೇಡ. ಅವರಿಗೂ ತಲೆ ಕೆಟ್ಟೀತು." ಎಂದು ಮಗಳಿಗೆ ಬುದ್ಧಿ ಹೇಳಿದರು. ಸೀತೆಯೂ ಹೆಚ್ಚು ಮಾತಾಡಲಾರಳು. ಒಟ್ಟಿನಲ್ಲಿ ಯಾಕೆ ಹುಟ್ಟಿದ್ದೇನಪ್ಪಾ ಇವರಿಗೆಲ್ಲಾ ಭಾರವಾಗಿ' ಎಂದು ಕಣ್ಣೀರು ಹಾಕುವುದು ತಪ್ಪಲಿಲ್ಲ ಆಕೆಗೆ ದಿನ ಬೆಳಗಾದರೆ.

ಮತ್ತೆ ಸಂಜೆಗೆ ನಾಟಕದ ನಟಿಯಂತೆ ಸೀತೆಗೆ ಅಲಂಕಾರವಾಯಿತು. ಅನಂತಪುರದ ಕುಪ್ಪೂರಾಯರ ಮಗ ಸುಂದರ ಆಕೆಯನ್ನು ನೋಡಲು ಬರಲಿದ್ದ. ಕಾಫಿ, ಉಪ್ಪಿಟ್ಟುಗಳ ತಯಾರಿಯಾಯಿತು. ಸೀತೆಗೆ ಕೋಪ ವುಮ್ಮಳಿಸಿ ಬರುತ್ತಲೇ ಇದ್ದಿತು. ಏನುಮಾಡಬಹುದು ಆಕೆಯಾದರೂ ? ಸುಬ್ಬರಾಯರು ಮತ್ತು ಲಕ್ಷ್ಮಣರಾಯರ ಓಡಾಟ ಹೇಳಿ ತೀರದು. ನಾರಾಯಣರಾಯರು ಹಾಸಿಗೆಯ ಮೇಲಿಂದಲೇ ಸೂಚನೆ ಸಲಹೆಗಳನ್ನು ಕೊಡುತ್ತಿದ್ದರು.

ಸುಂದರನೇನೋ ಒಪ್ಪಿದ. ಜಾತಕಗಳೂ ಕೂಡಿ ಬಂದವು. ಆದರೆ ಒಂದೇ ಒಂದು ಮಾತು ಅಡ್ಡ ಬಂತು. ಅನಂತಪುರದ ಕುಪ್ಪೂರಾಯರಿಗೇನೂ ದೇವರು ಕಡಿಮೆ ಮಾಡಿರಲಿಲ್ಲ. ಒಬ್ಬನೇ ಮಗ ಸುಂದರ. ಇಂಜನಿಯರಿಂಗ್‌ಗೆ ಕೊನೆ ತರಗತಿಯಲ್ಲಿ ಅಭ್ಯಾಸ ಮಾಡುತ್ತಿದ್ದ. ಒಡವೆಗಳನ್ನೆಷ್ಟು ಹಾಕಬೇಕು ಎಂಬುದೂ ನಿರ್ಧರವಾಯಿತು. ಆದರೆ ಕುಪ್ಪೂರಾಯರು ಎಲ್ಲಕ್ಕೂ ಸಮಾಧಾನದಿಂದ ಒಪ್ಪಿಗೆಯಿತ್ತರೂ ವರದಕ್ಷಿಣೆಯ ಮೊತ್ತವನ್ನು ಕಡಿಮೆ ಮಾಡುವಂತಿರಲಿಲ್ಲ.

"ಐದು ಸಾವಿರ ರೂಪಾಯಿ ರೋಖು ವರದಕ್ಷಿಣೆ, ಓದಿಗೆ ಖರ್ಚು" ಎಂದು ಘಂಟಾಘೋಷವಾಗಿ ನುಡಿದರು. "ಹೋಗಲಿ. ಇಂಗ್ಲಡಿಂಗೆ ಹೋಗುವುದಕ್ಕೇ ದುಡ್ಡು ಕೇಳಲಿಲ್ಲನಲ್ಲ. ಅದೇ ನಮ್ಮ ಪುಣ್ಯ" ಎಂದುಕೊಂಡು ನಾರಾಯಣರಾಯರು ತಮ್ಮ ಹೊಸಳ್ಳಿಯ ಭತ್ತದ ಗದ್ದೆಯನ್ನು ಮತ್ತೆ ಹರಿಲಾಲನಿಗೆ ಅಡವು ಹಾಕಲು ತಯಾರಾದರು. ತಮ್ಮ ವಾಸದ ಮನೆಯನ್ನು ಬರೆದರು. ಹರಿಲಾಲ ಲೆಕ್ಕಹಾಕಿ ಹಿಂದೆ ಮುಂದೆ ನೋಡಿ ಏಳೂವರೆ ಸಾವಿರ

ರೂಪಾಯಿ ಕೊಟ್ಟನು. ಅಲ್ಲಿಗೆ ನಾರಾಯಣರಾಯರ ಆಸ್ತಿಯು ಸರ್ವ ಸ್ವವೂ ಸಾಲಕ್ಕೆ ಸೇರಿದಂತಾಯ್ತು.

ಶಂಕರಮ್ಮನ ಸಂತೋಷಕ್ಕೆ ಮೇರೆಯೇ ಇಲ್ಲದಂತಾಯ್ತು. "ಓದಿದ ಹುಡುಗ ಸಿಕ್ಕಿದನಲ್ಲ ನಮ್ಮ ಮಗೂಗೆ" ಎಂದು ಎಲ್ಲರ ಮುಂದೆಯೂ ಅಳಿಯ ನನ್ನೂ ಬೀಗರನ್ನೂ ಕೊಂಡಾಡಿ, ಹಪ್ಪಳ, ಸಂಡಿಗೆ, ಸಾವಿಗೆ, ಉಪ್ಪಿನ ಕಾಯಿ, ಮಾಡಿಸಿಟ್ಟಳು. ರಾಯರಿಗೂ ಸ್ವಲ್ಪ ಆರಾಮವಾಗಿತ್ತು. ಮೆಲ್ಲಗೆ ಸಂಜೆಯ ಮುಂದೆ ಲಕ್ಷ್ಮಣನೊಡಯೋ, ಸುಬ್ಬೂ ಜೋತೆಯೋ ಓಡಾಡಿ ಬರುತ್ತಿದ್ದರು. ರಾಯರು ಸ್ನೇಹಿತರ ಬಲವಂತದಿಂದ ರಾಮನಿಗೊಂದು ಕಾಗದ ಬರೆದರು. ರಾಜಾನಿಗೇನು ಮಾಡಬೇಕು?

ಮದುವೆಯೇನೋ ಬಹು ವಿಜೃಂಭಣೆಯಿಂದ ನೆರವೇರಿತು. ರಾಯರ ಬೀಗರೂ ಬಹಳ ಉತ್ತಮಸ್ಥರು, ಸಮಾಧಾನಸ್ಥರು, ಮರ್ಯಾದೆವಂತರು. ಆದರೂ ಅಲ್ಲಲ್ಲಿ ಕಿಡಿನುಡಿಗಳು ಬಾರದೇ ಇರಲಿಲ್ಲ. "ಎಲೆಯಡಿಕೆ ತಂದರೆ ಸುಣ್ಣವೇ ಇಲ್ಲ" ಎಂದು ಬೀಗತಿಯೊಬ್ಬಳು, "ಬರೀ ಕಾಫೀ ಕುಡಿಸಿ ಸಾಯಿಸಿದರು" ಎಂದು ಪುರೋಹಿತ ವೆಂಕಣ್ಣಾಚಾರ್ಯರು, "ಲಾಡು ಬರೀ ರುಚಿ ತೋರಿಸಿದರು" ಎಂದು ಶೀನಪ್ಪ ನಾಯಕರು! ಹೀಗೇ ತಲೆಗೊಬ್ಬಬ್ಬರಿಗೆ ಮಾತು ಬಂತು. ತಂಗಿಯ ಮದುವೆಗೆ ರಾಮು ಬರಲಿಲ್ಲ. ಇನ್ನು ಮಂಜು ಎಲ್ಲಿಂದ ಬರಬೇಕು. ರಾಜಾರಾಯರೂ ಅಸ್ವಸ್ಥೆಯಿಂದ ಮಲಗಿದ್ದರು. ಸರಿ. ಉಳಿದವಳು ಗಂಗೂ ಒಬ್ಬಳೇ. ಆಕೆಯೇ ಬಂದು ಎಲ್ಲ ಕೆಲಸ ವನ್ನೂ ಮಾಡಿದಳು. ರಾಮು ಬಾರದಿದ್ದರೂ, ರಾಜಾರಾಮನ ವಿಷಯ ತಿಳಿಯದಿದ್ದರೂ ಮರುಗಿ ಶಂಕರಮ್ಮ ಹಿತ್ತಿಲ ಬಾಗಿಲಲ್ಲಿ ನಿಂತು ನೀರವ ವಾಗಿ ಅತ್ತಳು. "ನನಗೆ ಅಣ್ಣಂದಿರೇ ಇಲ್ಲವಾದರೆ?" ಎಂದು ಸೀತೆಯೂ ಒಳಗೇ ಕೊರಗಿದಳು. ನಾರಾಯಣರಾಯರೂ ಬಾಯೇ ಬಿಡುವ ಹಾಗಿರ ಲಿಲ್ಲ.

ಜಯರಾಮನು ನಿಜವಾಗಿಯೂ ತಂಗಿಯ ಮದುವೆಗೆ ಬರಬೇಕೆಂದಿದ್ದನು. ಅದಕ್ಕಾಗಿ ಸೀತೆಗೆಂದು ಒಂದು ಎಳೆಯ ಮುತ್ತಿನ ಸರ. ಸುಂದರನಿಗೆ ಉಂಗುರವೊಂದನ್ನು, ಮಾಡಿಸಿಟ್ಟಿದ್ದನು. ಆದರೆ ಲಗ್ನ ಪತ್ರವೇ ಆತನಿಗೆ ಬರ ಲಿಲ್ಲ. "ಹೂ. ಇವರಿಗೇ ಮನಸಿಲ್ಲದಿದ್ದ ಮೇಲೆ ನನ್ನದೇನಿದೆ! ಏನಾದರೂ

ಮಾಡಿಕೊಳ್ಳಲಿ” ಎಂದು ಕೋಪಗೊಂಡು ಸುಮ್ಮನಾಗಿ ಅವೆಲ್ಲವನ್ನೂ ಮಂಜುವಿಗೆ ಕೊಟ್ಟು ಬಿಟ್ಟನು. ವಾಸ್ತವವಾಗಿ ಲಗ್ನಪತ್ರಿಕೆಯೂ ಕಾಗದವೂ ಬಂದಿತ್ತು. ಮಂಜು ಅದನ್ನು ಹರಿದು ಒಗೆದಿದ್ದಳು. ಆಕೆಗೆ ಅದೇನು ಸಂತೋಷವೊ ದೇವರೇ ಬಲ್ಲ! ಇದು ರಾಮುನಿಗೆ ಹೇಗೆ ತಿಳಿಯಬೇಕು ? ಆ ಮೇಲೆ ಮತ್ತೆ ನುಡಿದವಳೂ ಅವಳೇ. “ನೋಡಿದಿರಾ, ಪತ್ರವೇ ಬರಲಿಲ್ಲ. ನಮ್ಮ ಮೇಲೆ ಮನಸ್ಸಿದ್ದರೆ ತಾನೇ ” ಎಂದು ಅವನ ಮನಸ್ಸನ್ನು ತಿರುಗಿಸಿದಳು.

ಅರ್ಧರ್ಧ ಮನಸ್ಸಿನಿಂದ ಎಲ್ಲವೂ ಮುಗಿಯಿತು. ಸುಂದರ ಏನೂ ಹೆಚ್ಚು ಬೇಡಲಿಲ್ಲ. ಕುಪ್ಪೂರಾಯರೂ ಬಹು ಉತ್ಸಾಹದಿಂದಲೇ ಇದ್ದರು. ಲಕ್ಷ್ಮಣರಾಯರ ಮತ್ತು ಸುಬ್ಬರಾಯರ ಸಂತೋಷಕ್ಕೆ ಹದ್ದೇ ಇಲ್ಲದಂತಾಯ್ತು ಸೀತೆಗೂ ಒಂದು ನವೋತ್ಸಾಹವು ಉದಿಸಿತು. ಸುಂದರ ಊರಿಗೆ ಹೋಗುವಾಗಲೇ ಸೀತೆ ಅವನ ಮುಖವನ್ನು ಸರಿಯಾಗಿ ಕಂಡುದುದು. ಅವನೂ ರೈಲು ಮರೆಯಾಗುವ ವರೆಗೂ ನೋಡುತ್ತಲಿದ್ದ. ಎಲ್ಲವೂ ಸುಗಮವಾದಂತಾಗಿ ತಮ್ಮ ಹೊರೆಯನ್ನು ಇಳಿಸಿದಂತಾಯಿತು ಎಂದು ನಾರಾಯಣರಾಯರು ತಮ್ಮ ಮನಸ್ಸಿನೊಡನೆ ಪ್ರಕೃತಿಯನ್ನೂ ಚೇತರಿಸಿಕೊಂಡರು. ರಾಜಾನ ಯೋಚನೆಯೊಂದು ಬಿಟ್ಟರೆ ಅವರಿಗಿನ್ನೇನೂ ಚಿಂತೆಯಿರಲಿಲ್ಲ. ಮತ್ತೆ ಬೆಳ್ಳಿಶಟ್ಟಿಯ ನೆನಪಾದ ಕೂಡಲೇ ಸಿಟ್ಟು ಉಕ್ಕುತ್ತಿತ್ತು.

ರಾಜಾ ಮೊದಲು ಬಂದಿಳಿದುದು ಮುಂಬಯಿಗೆ. ಆದರೆ ಅಲ್ಲಿಯ ಕಲುಷಿತ ಸಮಾಜದ ವಾತಾವರಣವನ್ನು ಕಂಡು ಹೇಸಿ. ಅಣ್ಣನ ಕಣ್ಣಿಗೆ ಬಿದ್ದೇನೆಂಬ ಹಿರಿಯ ಭಯ ಬೇರೆ. ಇವುಗಳಿಂದ ಪ್ರೇರಿತನಾಗಿ ನೇರಾಗಿ ಮದ್ರಾಸಿಗೆ ಬಂದಿಳಿದ. ಆಗ ತಾನೇ ಪ್ರಸಿದ್ಧವಾದ “ಕರ್ಣಾಟಕ ಕಲಾಭಿವೃದ್ಧಿ ನಾಟಕ ಮಂಡಳಿಯು'' ಯಶಸ್ವಿ ಪ್ರಯೋಗ ನಡೆಸಿತ್ತು. ಸಾಹಿತ್ಯ, ನಾಟಕ, ಕಲೆ ಎಂದರೆ ರಾಜನಿಗೆ ಬಹು ಪ್ರಾಣ. ನಾಟಕಮಂಡಳಿಯ ಮಾಲಕರಾದರೋ ಅವನು ಚೆನ್ನಾಗಿ ಅರಿತಿದ್ದ ನಟಶಿರೋಮಣಿ ವಿಶ್ವನಾಥರಾಯರು. ಅವರು ಯಮನ ಪಾತ್ರ, ಸುಯೋಧನ, ಕರ್ಣನ ಪಾತ್ರಗಳಿಗೆ ಬಹು ಹೆಸರಾಗಿದ್ದರು. ತೆಲುಗು ತಮಿಳರ ಆವಾಸಸ್ಥಾನವಾದ

ಮದ್ರಾಸಿನಲ್ಲೂ ಕೂಡ ಅವರ ಕೀರ್ತಿ ವಿಪುಲವಾಗಿತ್ತು.

ರಾಜನು ಧೈರ್ಯಮಾಡಿ ಅವರಿಳಿದುಕೊಂಡಿದ್ದ ಭವನಕ್ಕೆ ತೆರಳಿದನು. ಅವನಿಗೆ ಜೀವನಕ್ಕೆ ದಾರಿಯಾದರೂ ಯಾವುದು ? ನೌಕರಿ ಸಿಗಬೇಕಾದರೂ ಇನ್ನೂ ಎಷ್ಟೋ ದಿನ ಬೇಕು ಎಂದು ನಿರ್ಧರಮಾಡಿಕೊಂಡು ಹೋದ. ಅವನು ಹೋದಾಗ ರಾಯರು ಎಲೆಯಡಿಕೆ ಅಗಿಯುತ್ತಾ ಲೋಡಿಗೆ ಒರಗಿ ಗಂಭೀರವಾಗಿ ಕುಳಿತಿದ್ದರು. ಮುಖಕ್ಕೆ ಕಳೆಕೊಡುವ ಆ ಗಡುಸಾದ ಬಿಳಿ ಕರಿ ಮಿಶ್ರಿತವಾದ ಮೀಸೆ, ರಾಜಠೀವಿಯಿಂದ ಕುಳಿತಿರುವ ದರ್ಪ, ಕಲೆಯ ಕೇಂದ್ರಗಳಂತಿರುವ ನಿಚ್ಚಳವಾದ ಕಣ್ಣುಗಳು, ಆರಾಮವಾಗಿ ಬೆಳೆದ ದೇಹ, ನೋಡಲು ಬಹು ದರ್ಪರೂಪಿ ರಾಯರು. ರಾಜ ಸ್ವಲ್ಪ ಹೊತ್ತು ಅವಕ್ಕಾದ.

"ಏನಪ್ಪಾ ಯಾಕೆ ಬಂದೆ?'' ಎಂದು ರಾಯರೇ ಮೊದಲು ಮಾತಾಡಿದರು.

"ತಮ್ಮಲ್ಲೇ ಬಂದಿದ್ದೆ ರಾಯರೇ "

"ಏನಾಗಬೇಕಪ್ಪಾ ನನ್ನಿಂದ?"

"ನನಗೂ ಕಲಾಸೇವೆಯ ಸಂದರ್ಭ ಒದಗಿಸಿ ಕೊಡಬೇಕು ರಾಯರೆ"

"ಅಂದರೆ?"

''ನಾಟಕದಲ್ಲಿ ಪಾತ್ರ ಮಾಡಬೇಕೆಂಬ ಆಸೆಯಿದೆ.''

ರಾಯರು ಸ್ವಲ್ಪ ಹೊತ್ತು ತೀಕ್ಷ್ಣವಾಗಿ ಅವನ ಕಡೆ ನೋಡಿದರು. ಮತ್ತೊಮ್ಮೆ ನುಡಿದರು.

''ಹೌದಪ್ಪಾ, ನಿನಗೆ ಅಭಿನಯ ಬರುತ್ತದೇನು?''

''ಬರುತ್ತದೆ. ಕೆಲವಾರು ನಾಟಕಗಳಲ್ಲಿ ಮಾಡಿದ್ದೇನೆ"

''ಸಂಗೀತ?"

"ಅಷ್ಟು ಪರಿಶ್ರಮವಿಲ್ಲ. ಕಲಿತೇನೆಂಬ ನಂಬಿಕೆಯಿದೆ.''

''ಆಯಿತು, ನೋಡುವಾ. ಇವತ್ತಿನಿಂದ ನೀನು ಇಲ್ಲಿಯೇ ಇರು. ಮ್ಯಾನೇಜರರಿಗೆ ಹೇಳುತ್ತೇನೆ. ಪಾತ್ರದ ಮಾತುಗಳನ್ನು ಕಲಿತ ಮೇಲೆ ಒಂದು ರಿಹರ್ಸಲ್ ನೋಡಿ ಹೇಳುತ್ತೇನೆ'' ಎಂದರು.

''ಬಹಳ ಸಂತೋಷ ಸಾರ್'' ಎಂದು ಏಳುವಷ್ಟರಲ್ಲಿ ಮ್ಯಾನೇಜರ್ ಮರಿಸ್ವಾಮಿಯು ಬಂದ. ರಾಯರು ಹೊಸಬನನ್ನು ತೋರಿಸಿ, '' ಸ್ವಲ್ಪ

ಇವರನ್ನು ತಯಾರಿಸು ಸ್ವಾಮಿ. ಬಹಳ ಆಸಯಿದ್ದಂತೆ ಇದೆ. ಮುಂದಕ್ಕೆ ಬಂದರೂ ಬರಬಹುದು. ಅಂದ ಹಾಗೆ ಹೆಸರೇನೋ ಕೇಳಲೇ ಇಲ್ಲವಲ್ಲ!"

"ರಾಜಾ''

"ಊರು ಯಾವುದು?" ರಾಜನಿಗೆ ಸ್ವಲ್ಪ ಕಷ್ಟಕ್ಕೆ ಬಂದಿತು. ಹಿಂದೆ ಮುಂದೆ ನೋಡುವ ಹಾಗಿರಲಿಲ್ಲ. ಏನಾದರೂ ತಕ್ಷಣ ಹೇಳಲೇ ಬೇಕು.

"ಅನಂತಪುರ''

"ಸ್ವಲ್ಪ ಓದಿದ ಮುಖ ಇದೆಯಲ್ಲಾ"

"ಹೌದು ರಾಯರೆ, ಇಂಟರ್ ವರೆಗೆ"

"ಮತ್ತೆ ನಿನಗೆ ಯಾಕೆ ಬೇಕು ಈ ಹೊಲಸು ನಟನಾಭಿನಯ''

"ಅಂಥಾ ಮಾತನಾಡಬೇಡಿ ರಾಯರೇ. ಕಲೆಯೂ ಹೊಲಸೇನು?'' ರಾಜನಿಗೆ ಮುಖ ಕೆಂಪಡರಿತು. ರಾಯರು ಅವನ ವರ್ಚಸ್ಸನ್ನು ನೋಡಿ ಬೆರಗಾದರು.

" ಹಾಗಲ್ಲ ರಾಜಾ, ನಿಮ್ಮಂಥ ವಿದ್ಯಾವಂತರು ನಾಟಕಕ್ಕಿಳಿಯುವುದು ನಿಮ್ಮ ವಿದ್ಯೆಗೆ ಅವಮರ್ಯಾದೆಯಲ್ಲವೇನು ?"

"ಎಂದಿಗೂ ಇಲ್ಲ ರಾಯರೆ. ನಮ್ಮಂಥ ವಿದ್ಯಾವಂತರೇ ಕಲಾಪ್ರೋತ್ಸಾಹಕ್ಕೆಡೆ ಕೊಡದಿದ್ದರೆ ಇನ್ನೆಲ್ಲಿಯ ಪ್ರಗತಿ ? ನೀವೇ ನೋಡಿದ್ದೀರಲ್ಲಾ ಮಹಾರಾಷ್ಟ್ರದವರು ಯಾವ ರೀತಿ ಕಲೆಗೆ ನೆರವಾಗುತ್ತಿದ್ದಾರೆ. ಆಚಾರ್ಯ ಅತ್ರೆಯವರು ಮರ್ಯಾದಸ್ಥರಲ್ಲವಾಗಿದ್ದಾರೇನು ?"ರಾಯರು ನಿಜವಾಗಿಯೂ ಬಹು ಪ್ರಸನ್ನರಾದರು. ಮತ್ತೆ ರಾಮು ಮುಂದರಿಸಿದ.

"ಕುಲೀನಸ್ಥರು, ಮರ್ಯಾದಸ್ಥರು, ಎಲ್ಲರೂ ಹೇಗೆ ಮುಂದೆ ಬಂದಿದ್ದಾರೆ ಕೇವಲ ಕೆಲವು ವರ್ಷಗಳಲ್ಲಿ. ಸಿನಿಮಾ ಪ್ರಪಂಚದಲ್ಲಿ ಎಷ್ಟು ಆಸ್ಥೆಯೋ, ಅಷ್ಟೇ ನಾಟಕ ರಂಗದಲ್ಲಿದೆ. ನಾಟಕ ರಂಗ ಶತಮಾನಗಳಿಂದ ನಡೆದು ಬಂದಿದ್ದರೂ. ನಾಟಕ ಕಲೆಯಿಂದು ಯಾರಿಗೂ ಬೇಡವಾಗಿದೆ. ನಮ್ಮ ಜನ ಪರರ ಸಂಗೀತಕ್ಕೆ ಹೆಚ್ಚು ಮನ್ನಣೆ ಕೊಡುವರೇ ಹೊರತು, ನಮ್ಮವರ ಸಾಂಪ್ರದಾಯಿಕ ಪದ್ಧತಿಗೆ ನಾಲ್ಕು ಜನರೂ ನೆರೆಯಲಾರರು. ನಮಗೆ ಕನ್ನಡವೇಕೆ, ಏಕೀಕರಣವೇಕೆ, ಸಂಸ್ಕೃತಿಯೇಕೆ, ಸಾಹಿತ್ಯವೇಕೆ?" ರಾಜನ ಮುಖ ಗಂಭೀರವಾಯಿತು. ಕೋಪದ ಮೇರೆ ಹರಿಯಿತು.

ವಿಶ್ವನಾಥರಾಯರು ಇಂಥಾ ಮಾತುಗಳನ್ನು ಇದೇ ಮೊದಲು ಕೇಳಿದ್ದು
"ರಾಜಾ ನಾನಿಂದು ಧನ್ಯನಾದೆ. ನಿನ್ನಂಥ ತರುಣರು ಸಿಕ್ಕರೆ ಕನ್ನಡ ರಂಗದ ಜಯಭೇರಿ ಬಾರಿಸೇನು. ನೀನು ಇನ್ನೆಲ್ಲಿಯೂ ಹೋಗದೆ ಈ ಸೇವೆಯಲ್ಲೇ ನಿಂತರೆ ಖ್ಯಾತಿ ಕಟ್ಟಿಟ್ಟದ್ದು. ಅಷ್ಟನ್ನು ನನಗೆ ಮಾಡಿ ಬಿಡು" ಎಂದು ಭುಜದ ಮೇಲೆ ಕೈ ಹಾಕಿದರು. ನಟವರ್ಯರು ತನ್ನನ್ನು ಇಷ್ಟು ಆದರಿಸಿದ್ದಕ್ಕೆ ಅವನಿಗೇ ಆಶ್ಚರ್ಯ. ಅಂದಿನ ಕ್ಷಣದಿಂದಲೇ ಪ್ರತಿಜ್ಞೆ ತೊಟ್ಟು ಬಿಟ್ಟ. ನಾಟಕವೇ ಅವನ ಜೀವ; ಸಂಗೀತವೇ ಭಾವವಾಯಿತು.

ಕೇವಲ ಎರಡು ವಾರಗಳಲ್ಲಿಯೇ ಅವನ ಕೀರ್ತಿ ಮದ್ರಾಸಿನಲ್ಲಿ ಮೊಳಗಿತು. "ಉಷಾ ಸ್ವಯಂವರ''ದ ಅನಿರುದ್ಧನ ಪಾತ್ರಕ್ಕೆ ರಾಜನ ಹೆಸರು ಗಾದೆಯಾಯಿತು, "ಕುರುಕ್ಷೇತ್ರ"ದ ಕೃಷ್ಣನ ಪಾತ್ರ, "ಸುಭದ್ರಾ''ದ ಅರ್ಜುನ, ದಾನಶೂರ ಕರ್ಣನ "ದುರ್ಯೋಧನ" ಪಾತ್ರಗಳಿಗೆ ಅವನು ಮೊಸಲಾದ. ಅವನ ಹೆಸರಷ್ಟು ಕೇಳಿದರೆ ಸಾಕು ಜನ ನೆರೆಯುತ್ತಿತ್ತು. ಕರ್ಣ ನಾಟಕದಲ್ಲಿ ದುರ್ಯೋಧನನ ಪಾತ್ರ ಬಹು ಅದ್ಭುತ ರಮಣೀಯ ವಾಗಿತ್ತು. ದುರ್ಯೋಧನನ್ನು ನಿಜವಾಗಿಯೂ ಸುಯೋಧನನನ್ನಾಗಿ ಮಾಡುವಂತಿತ್ತು ಅವನ ಅಭಿನಯ.

ವಿಶ್ವನಾಥರಾಯರು ತಮಗೆ ಒಬ್ಬ ಒಳ್ಳೆಯ ನಟ ದೊರಕಿದನೆಂದು ಹಿಗ್ಗಿದರು. ಇಂಥದಕ್ಕಾಗಿಯೇ ಅವರು ಇಷ್ಟುದಿನ ಕಾಯುತ್ತಿದ್ದರು. ಪ್ರತಿದಿನ ಮುಂದೆ ಕೂಡಿಸಿಕೊಂಡು ಅವನಿಗೆ ನಟನೆಯ ಚಾತುರ್ಯದ ಬಗ್ಗೆ ಪಾಠ ಹೇಳುತ್ತಿದ್ದರು. ಅವರು ಬೆರಳು ತೋರಿಸಿದರೆ ಹಸ್ತ ನುಂಗುವಷ್ಟು ತಯಾರಾದ ರಾಜ. ದಿನಕ್ಕೊಂದು ವಿಧವಾದ ನಟನಾ ಕೌಶಲ್ಯವು ಅವನಿಂದ ಹೊರಡುತ್ತಿತ್ತು. ಸಂಗೀತಕ್ಕೆ ಸ್ವಲ್ಪ ಗಮನ ಕೊಡಲು ಮನಸ್ಸು ಮಾಡಿದ.

ಸಂಗೀತವೆಂದರೆ ರಾಜನಿಗೆ ಪಂಚಪ್ರಾಣ. ಎಲ್ಲಿ ಸಂಗೀತ ಕಚೇರಿಯಾವರೂ ಎಷ್ಟು ವೇಳೆಯಾದರೂ ಮುಗಿಯುವ ವರೆಗೂ ಎದ್ದು ಬರುತ್ತಿರಲಿಲ್ಲ. "ನನಗೆ ಸಂಗೀತ ಬಾರದಿದ್ದರಷ್ಟೇ ಹೋಗಲಿ. ಸವಿಯುವ ಶಕ್ತಿಯನ್ನಾದರೂ ದೇವರು ಕೊಟ್ಟಿದ್ದಾನಲ್ಲ. ಅಷ್ಟೇ ಸಾಕು" ಎಂದು ಸಮಾಧಾನ ಮಾಡಿಕೊಳ್ಳುತ್ತಿದ್ದನು. ''ದಾನಶೂರ ಕರ್ಣ"ನ ಮೈಸೂರು-ಕೊಟ್ಟೂರಪ್ಪನವರ ಪಾತ್ರಕ್ಕೆ ಮನಮೆಚ್ಚಿ ಹೋಗಿದ್ದ. ಕರ್ಣನು ತಾಯಿಯ ವಚನ,

ಸ್ವಾಮಿಯ ಸೇವೆ ಇವೆರಡರ ಮಧ್ಯೆ ನವೆಯುತ್ತಿರುವ ದೃಶ್ಯ ಬಂದಾಗ ಕಣ್ಣೀರು ಬಿಟ್ಟುದುದೂ ಉಂಟು. ವೈಣಿಕ ಪ್ರವೀಣ ವೀಣೆ ಶೇಷಣ್ಣನವರನ್ನು ನೋಡುವ ಸುಯೋಗವಿಲ್ಲದಿದ್ದರೂ, ಕನ್ನಡಕ್ಕೆ ಒಬ್ಬ ಪಿಟೀಲು ಚೌಡಯ್ಯನವರಿದ್ದಾರಲ್ಲ. ನಟವರ್ಯ ವರದಾಚಾರ್ಯರು, ವಾಮನ ಮಾಸ್ತರರು ಕೀರ್ತಿ ಶೇಷರಾದರೂ ಅವರ ಹೆಸರುಳಿಸುವ ಕಲಾವಿದರಿದ್ದಾರಲ್ಲಾ ಎಂದು ತನ್ನ ದುರಾದೃಷ್ಟವನ್ನೊಮ್ಮೆ ಹಳಿದುಕೊಂಡು ಹೊರಟದ್ದೂ ಉಂಟು ರಾಜ. ಬರ ಬರುತ್ತಾ ರಾಜನೇ ನಾಟಕ, ನಾಟಕವೇ ರಾಜ ಎನ್ನುವಷ್ಟು ಆಸಕ್ತಿ ತೋರಿ, ವಿವಿಧ ಚಾತುರ್ಯ, ಕೌಶಲ್ಯ ಪ್ರಯೋಗಗಳಿಂದ ಭಾರತದ ಅಪರಿಚಿತ ಪ್ರದೇಶಗಳಲ್ಲೆಲ್ಲಾ ಸಂಚರಿಸಿದ. "ಭಾಷೆಯೊಂದು ಅರಿಯದಾದರೆ ಭಾವವೆಲ್ಲಿ ಹೋದೀತು? ಕರ್ಣ ಎಲ್ಲಿ ಹೋದರೂ ಕರ್ಣನೇ ಅರ್ಜುನ ಎಲ್ಲಿದ್ದರೂ ಅರ್ಜುನನೇ" ಎಂದು ಅವನ ಭಾವನೆ. ಮುಂಬಯಿಗೆ ಬಂದಾಗ ಅವನಿಗೆ ಅಣ್ಣನ ಭಯದ ಪಿಡುಗು ಹತ್ತಿತು. ಆದರೂ ಅವನ ಅಣ್ಣ ಕನ್ನಡ, ಅದರಲ್ಲೂ ನಾಟಕದ ಮೇಲೆ ಎಷ್ಟು ಮೋಹವುಳ್ಳವನೆಂದು ಬಲ್ಲ ಅವನು ಷೇಕ್ಸಪಿಯರ್‌ನ್ ಹ್ಯಾಮಲ್‌ಟ್‌ಗೇ ಹೋದಾನೇ ಹೊರತು, ತಾನಸೇನ ಚಿತ್ರಕ್ಕೇ ದುಡ್ಡಿಟ್ಟಾನೇ ಹೊರತು, ಕರ್ಣನ ನಾಟಕ, ಪುರಂದರದಾಸರ ನಾಟಕಗಳಿಗೆ ತಲೆಹಾಕುವ ಅಪರಾಧ ಮಾಡಿರಲಿಲ್ಲ. ಆದರೂ ರಾಜ ತಲೆ ಮರೆಸಿಕೊಂಡೇ ಇರಬೇಕಾಯಿತು.

ಜಯರಾಮನ ಆಸ್ಪತ್ರೆಯು ಅಷ್ಟಾಗಿ ಹೆಸರುಗೊಂಡಿರಲಿಲ್ಲ. ಮುಂಬಯಿಯ ಪ್ರಸಿದ್ಧ ಡಾಕ್ಟರರ ಮಧ್ಯೆ ಇವನದೇತರದಾತೀತು? ಇಂಗ್ಲೆಂಡ್ ಅಮೇರಿಕಾ, ಜರ್ಮನಿಗಳನ್ನು ಸುತ್ತಿ ಬಂದ ಪ್ರವೀಣರಿದ್ದಾಗ ಈ ಹೊಸಬನ ಕಡೆ ದೃಷ್ಟಿ ಅಷ್ಟು ಹೆಚ್ಚಾಗಿರಲಿಲ್ಲ. ಆದರೆ ಸಮಾಜದ ದೃಷ್ಟಿಯಲ್ಲಿ ದೊಡ್ಡ ಕುಲೀನಸ್ಥನಾಗಿರಲೇ ಬೇಕಾಯಿತು. ದೊಡ್ಡವರ ಅಳಿಯ ಬೇರೆ. ಅದಕ್ಕೆ ಖರ್ಚು ಬೇಕಲ್ಲ. ! ಬರುವ ಚಿಲ್ಲರೆ ಹಣ ಅವನ ಸಿಗರೇಟಿಗೇ, ಚಹಾಕ್ಕೇ ಮುಟ್ಟುತ್ತಿತ್ತು. ಇನ್ನು ಮಂಜುವಿಗೆ ಕಂಡ ಕಂಡ ಸೀರೆಯಾಗಬೇಕು. ತನಗೆ ಹೊಸ ಬಟ್ಟೆಗಳಾಗಬೇಕು. ಸಿನಿಮಾ, ನಾಟಕ, ಕ್ಲಬ್, ಸಭೆ, ಸತ್ಕಾರಕೂಟ ಇವುಗಳಿಗೆಲ್ಲಾ ದುಡ್ಡು ಎಲ್ಲಿಂದ ತೆರಬೇಕು? ಎಲ್ಲವೂ

ಮಂಜುವಿನ ಹಿಡಿತದಲ್ಲಿ. ಖರ್ಚಿನ ಬಾಬತ್ತೆಲ್ಲಾ ಆಕೆಯದೇ. ಈ ಸಾರಿ ಪ್ಲಿಮತ್ ಕಾರ್,ಮುಂದಿನ ಸಾರಿ ರೋಲ್ಸ್‌ರಾಯ್ಸ್,ಮತ್ತೊಮ್ಮೆ ಬ್ಯೂಕ್, ಪಾಂಟಿಕ್ ಹೀಗೇ ಕೊಳ್ಳುವುದು, ಮಾರುವುದು ನಡೆದೇ ಇದ್ದುವು. ಯಾಕೆ ಹಾಗೆ ಮಾಡುತ್ತೀಯ ಎಂದು ಕೇಳುವ ಧೈರ್ಯವಿಲ್ಲ ಅಧಿಕಾರ ಅವನಿಗಿಲ್ಲ. ಎಷ್ಟಾದರೂ ಆಕೆಯದೇ ಸಂಪತ್ತು. ಖರ್ಚಾದರೂ ಆಕೆಯದೇ ಅಲ್ಲವೇ? ತನ್ನದೇನಿದೆ? ಎಂದು ಮಮ್ಮಲ ಮರುಗುತ್ತಿದ್ದನೇ ಹೊರತು ಏನೂ ಮಾಡುವ ಹಾಗಿರಲಿಲ್ಲ. ಸ್ವಲ್ಪ ಚುರುಕು ಅವನಿಗೆ ಆಗಲೇ ಬಡಿಯ ಹತ್ತಿತು.

ಎಷ್ಟೋ ಸಲ ರಾತ್ರಿ ತೀರ ಅವೇಳೆಯಲ್ಲಿ ಮನೆಗೆ ಬರುತ್ತಿದ್ದಳು. ಯಾಕೆಂದು ಕೇಳಿದರೆ ಸಮಾಜವೋ, ಸ್ನೇಹಿತರ ಮನೆಯ ಸಮಾರಂಭವೋ ಸಿದ್ಧವಾಗಿರುತ್ತಿತ್ತು. ಹೆಚ್ಚು ಮಾತನಾಡಲಾರದೆ ಸುಮ್ಮನೆ ಹಾಸಿಗೆಯಲ್ಲಿ ಉರುಳುತ್ತಿದ್ದನು. ಕೆಲವು ಸಾರಿ ರಾಮುನನ್ನೂ ಕರೆದುಕೊಂಡು ಹೋಗಿಬಿಡುತ್ತಿದ್ದಳು. ಜಯರಾಮನ ಆಸ್ಪತ್ರೆ ತಿಂಗಳಿಗಿಪ್ಪತ್ತು ದಿನದಷ್ಟು ಸರಿಯಾಗಿ ಕೆಲಸ ಮಾಡುತ್ತಿರಲಿಲ್ಲ. ಬೀಗದ ದರ್ಬಾರೇ ಹೆಚ್ಚು. ಜಯರಾಮನಿಗೆ ಮನಸ್ವಾಸ್ಥ್ಯ ಕೆಡಲಾರಂಭಿಸಿತು."ಇದೇನು ಸಂಸಾರವೋ ಹುಡುಗಾಟಿಕೆಯೋ?" ಎಂದು ತಲೆಕೆರೆದುಕೊಳ್ಳುತ್ತಿದ್ದನು. ಆಸ್ಪತ್ರೆಗೆ ಹೋದಾಗಲೇ ಸ್ವಲ್ಪ ಮನಸ್ಫೂರ್ತಿ ಕೆಲಸ ಮಾಡುತ್ತಿದ್ದನು. ಆದರೂ ಆಗಾಗ್ಗೆ ತಲೆ ಕೆಡಿಸಿಕೊಂಡು, ರೋಗಿಗಳ ಮೇಲೆ ರೇಗಾಡುತ್ತಿದ್ದನು.

ಈ ಮಧ್ಯೆ ರಾಜಾರಾಯರು ದಿನೇ ದಿನೇ ಇಳಿಯುತ್ತಿದ್ದರು. ಯಾವ ಪ್ರಸಿದ್ಧ ಡಾಕ್ಟರರೂ ಅರಿಯದ ರೋಗಗಳು ಸೇರಿದ್ದವು. ವಾಸಿ ಮಾಡುವುದಂತೂ ದೂರವೇ ಆಯಿತು. ರಾತ್ರಿಯೆಲ್ಲಾ ಬರೀ ನರಳುವಿಕೆಯೇ ಹೆಚ್ಚಾಯಿತು. ಹೊರಗಡೆ ಸ್ವಸ್ಥವಿಲ್ಲ. ಒಳಗೆ ಮನಸ್ಸಿಲ್ಲದಂತಾಯಿತು ರಾಮುನ ಸ್ಥಿತಿ. ಮಂಜು ಮಾತ್ರ ಏನೂ ತೊಂದರೆಯಿಲ್ಲದವಳಂತೆ ಇರುತ್ತಿದ್ದಳು. ರಾಯರಿಗೆ ಉಪಚಾರ ಮಾಡುವುದು, ನಾರಾಯಣನಿಗೆ ಮತ್ತು ರಾಮುನಿಗೆ ಬಂದುವು. ಯಾವಾಗಲೋ ಏನೋ ಒಮ್ಮೆ ಮಂಜು ಹಣ್ಣು ಕೊಡಲು ಬರುತ್ತಿದ್ದಳು.

ಹೀಗಾಗಿ ರಾಮುನೂ ಎಷ್ಟು ಹೊತ್ತು ಹೊರಗಿದ್ದರೆ ಅಷ್ಟು ಲೇಸು

ಎಂದುಕೊಂಡು ರಾತ್ರಿ ಹನ್ನೆರಡರ ವರೆಗೆ ಅಲ್ಲಲ್ಲೇ ತಿರುಗಾಡುತ್ತಿದ್ದನು. ಮತ್ತೆ ಪುನಃ ತಲೆ ನೋವಿಗೆ ಆಹ್ವಾನ. ಇವನನ್ನು ಮೀರಿಸಿ ಮಂಜು ತಿರುಗುತ್ತಿದ್ದಳು. ಒಂದು ರಾತ್ರಿ ಆಕೆ ಬಂದುದು ಎರಡು ಗಂಟೆಯ ವೇಳೆಯಲ್ಲಿ. ಆರಾಮವಾಗಿ ನಿದ್ರಿಸುತ್ತಿದ್ದ ರಾಮನಿಗೆ ಆಕೆಯ ಕೂಗಿನಿಂದ ಎಚ್ಚರವಾಗಿ ಬಾಗಿಲು ತೆರೆದನು.

"ಎಲ್ಲಿ ಹೋಗಿದ್ದೆ ಇಷ್ಟು ಹೊತ್ತು ?"

"ಏನಿದು ದಿನಾ ಪ್ರಾರಬ್ಧ. ಹೊರಕ್ಕೆ ಹೋಗುವುದೇ ಕಷ್ಟವಾಯಿತಲ್ಲಾ.!''

"ಮನೆಸೇರದೆ, ವೇಳೆಯಿಲ್ಲದೆ ತಿರುಗು ಅಂತಾ ಹೇಳಿದ್ದಾರೇನು ನಿನಗೆ ?''

"ಅದೆಲ್ಲಾ ನಿಮ್ಮ ನಿರ್ಬಂಧಕ್ಕೆ ಸೇರಿದ್ದಲ್ಲ"

ರಾಮನಿಗೆ ಕೋಪ ಎಲ್ಲಿಂದ ಬಂತೋ ಏನೋ, ಬಲವಾಗಿ ಬೀಸಿ ಕೆನ್ನೆಗೊಂದು ಕೊಟ್ಟನು. ಮಂಜುವಿನ ಮುಖ ಕೆಂಪೇರಿ, ತುಟಿಗಳು ಅದುರಿದುವು. ಅದುರುವ ಅಧರಗಳಿಂದ, ದಿಟ್ಟ ಧ್ವನಿಯಲ್ಲಿ— "ನೀನು ನೀಚ" ಎಂಬ ನುಡಿಗಳು ಹೊರಬಿದ್ದವು. ರಾಮನ ಕೋಪ ತುಟಾಗ್ರಕ್ಕೇರಿತು. ತನ್ನ ಮೈಮೇಲಿನ ಎಚ್ಚರ ಹಾರಿತು. ನುತ್ತೆರಡು ಕೆನ್ನೆಗೆ ಬಿಗಿದ. ಹೊಡೆತ ತಾಳಲಾರದೆ ಮಂಜು ಕೂಗಿ ಬಿಟ್ಟಳು. ಪಕ್ಕದ ಕೋಣೆಯಿಂದ ರಾಯರು ಭಯಚಕಿತರಾಗಿ ಎದ್ದು ಬಂದರು. ರಾಮಾಯಣವೆಲ್ಲಾ ಆಕೆಯ ಬಾಯಿಂದಲೇ ಕೇಳಿದರು. ರಾಮ ತಲೆಯ ಮೇಲೆ ಕೈಹೊತ್ತಿದ್ದ. ರಾಯರಿಗಾದರೋ, ಮಂಜುವಿನ ತಪ್ಪು ಎದ್ದು ಕಾಣುತ್ತಿದ್ದರೂ, ರಾಮನು ಮಾಡಿದ ಕೃತ್ಯಕ್ಕೆ ಸ್ವಲ್ಪ ಕೋಪ ಗೊಂಡರಾದರೂ ಮಾತನಾಡಲಿಲ್ಲ. ಮಗಳನ್ನು ಕರೆದುಕೊಂಡು ಹೋಗಿ ತಮ್ಮೆಡೆಯಲ್ಲಿ ಮಲಗಿಸಿಕೊಂಡರು. ರಾಮನೂ ಉದ್ವಿಗ್ನ ಮನಸ್ಕನಾಗಿ ಮುಖ ಕೆಳಗಾಗಿ ಮಲಗಿದನು. ಏನೇನೋ ಯೋಚನಾತರಂಗದಲ್ಲಿ ಕೊನೆಗೆ ನಿದ್ರೆಯ ಜೊಂಪು ಬಂದಿತು.

ಅಂದಿನ ಘಟನೆಯ ತರುವಾಯ ವಿರಸ ಹೆಚ್ಚಾಯಿತು. ಆದರೆ, ಮಂಜು ಸ್ವಲ್ಪ ಹೊತ್ತಿಗೆ ಮುಂಚೆ ಮನೆ ಸೇರುತ್ತಿದ್ದಳಾದರೂ ಮಾತುಕತೆ ಏನೂ ನಡೆಯುತ್ತಿರಲಿಲ್ಲ. ಮುಖ ಯಾವಾಗಲೂ ಸಿಡುಕಿನಿಂದಲೇ

ಇರುತ್ತಿತ್ತು. ರಾಮನೂ ಹೆಚ್ಚು ವೇಳೆಯನ್ನು ಆಸ್ಪತ್ರೆಯ ರೋಗಿಗಳ ಶುಶ್ರೂಷೆಯಲ್ಲಿ ಕಳೆಯುತ್ತಾ ಬಂದನು. ವರಮಾನದಲ್ಲಿ ಸ್ವಲ್ಪ ಹೆಚ್ಚಳವೂ ಬಂದಿತು. ಆದರೆ ರಾಮುನ ಮನಸ್ಸು ಇತ್ತಿತ್ತಲಾಗಿ ರೋಗಿಗಳ ಸ್ಥಿತಿಯ ಕಡೆ ಹೆಚ್ಚಾಯಿತೇ ಹೊರತು, ಹಣದ ಕಡೆ ಕಡಿಮೆಯಾಯಿತು.

ರಾಜಾರಾಯರ ಸ್ಥಿತಿ ದಿನ ದಿನಕ್ಕೂ ಉಲ್ಬಣಕ್ಕೇರುತ್ತಿತ್ತು. ಎಷ್ಟೋ ಸಾರಿ ಜ್ಞಾನ ತಪ್ಪುತ್ತಿದ್ದರು. ರಾಮನೂ, ನಾರಾಯಣನೂ, ಮಂಜುವೂ, ಗಂಗೂ ಎಲ್ಲರೂ ರಾತ್ರಿಯೆಲ್ಲಾ ಆರೈಕೆ ಮಾಡುತ್ತಿದ್ದರು. ಈ ಮಧ್ಯೆ ರಾಯರ ಇನ್ನೊಬ್ಬ ತಂಗಿಯ ಮಗ ಮುರಲೀಧರ ಬಿ. ಎ. ಓದಲಿಕ್ಕೆಂದು ಬಂದು ಇಲ್ಲಿ ಸೇರಿದ್ದನು. ತಾಯಿ ಇಲ್ಲದ ಹುಡುಗ, ತಂದೆಯ ಲಂಪಟ ತನದಿಂದ ತೊಂದರೆ ಆದೀತೆಂದು ರಾಯರೇ ಅವನನ್ನು ಕರೆಸಿದ್ದರು. ಜಯರಾಮನೂ ಬಾವನನ್ನು ಅಷ್ಟಾಗಿ ವಿಚಾರಿಸಿಕೊಳ್ಳುತ್ತಿರಲಿಲ್ಲ. ಅವ ನನ್ನು ಮುಖ್ಯವಾಗಿ ಕರೆಸಿದ್ದುದು ತಮ್ಮ ಸೇವೆಗಾಗಿ. ಗಂಗೂವಿಗೂ ಆತ ಅಚ್ಚು ಮೆಚ್ಚಿನವನು. ಹುಟ್ಟಿದಂದಿನಿಂದ ಅವನನ್ನು ನೋಡದಿದ್ದರೂ, ಭಾಂಧವ್ಯದ ಎಳೆಯಿಂದ ಒಬ್ಬರನ್ನೊಬ್ಬರು ಅನ್ಯೋನ್ಯದಿಂದ ಕಾಣುತ್ತಿ ದ್ದರು. ಆದರೆ ಜಯರಾಮು, ಅಡಿಗೆಯ ನಾರಾಯಣ ಇಬ್ಬರು ಮಾತ್ರ ಅವನನ್ನು ಅಷ್ಟಾಗಿ ಮಾತಾಡಿಸುತ್ತಿರಲಿಲ್ಲ. ಇಬ್ಬರೂ ನಿಸ್ಸಹಾಯಕರೇ ತಾನೇ ? ಎಷ್ಟೋ ವಿಧದಲ್ಲಿ ನಾರಾಯಣನದೇ ಒಳ್ಳೆಯ ಸ್ಥಿತಿಯಾಗಿತ್ತು. ಮುರಲಿಯೇ ಬಡಿಸಿಕೊಂಡು ಊಟಮಾಡಬೇಕಾಗಿದ್ದ ಸಂದರ್ಭಗಳೂ ಉಂಟು. ಅಂತೂ ಮುರಲಿ ಬಹಳ ಬೇಗನೇ ಮನೆಯವರಲ್ಲೊಬ್ಬನಾದನು.

ಒಂದು ಶನಿವಾರ ರಾಯರು ಜ್ಞಾನತಪ್ಪಿದರು. ಡಾಕ್ಟರ್ ಪಾಲ್ಸ್‌ರು ಜಯರಾಮನನ್ನು ದೂರ ಕರೆದುಕೊಂಡು ಹೋಗಿ, ಪರಿಸ್ಥಿತಿಯನ್ನು ಹೇಳಿ ದರು. ಉತ್ತರ ಕ್ಷಣದಲ್ಲಿಯೇ ಗಂಗೂ ಮತ್ತು ಮಂಜುವಿನ ಹುಯ್ಯಲು ಕೇಳಿ ಬಂತು. ಮುರಲಿಯೂ ಹೊರಗೆ ಬಂದು ನಿಂತನು. ರಾಯರು ಸಾಯಲಾರದ ಸಂಕಟದಿಂದ ಒಮ್ಮೆಲೇ ಎದ್ದೇಳುವದರಲ್ಲಿದ್ದು, ನಿಶ್ಚೇಷ್ಟಿತ ರಾಗಿ ಕೈಯನ್ನೊಮ್ಮೆ ಮೇಲಕ್ಕೆತ್ತಿ, ಸಿಕ್ಕಿದ ಉಸಿರಿನಿಂದ. "ರಾಮ" ಎಂದು ದೇವರನ್ನು ನೆನಸಿ ಹಾಸಿಗೆಯಲ್ಲಿ ಧೊಪ್ಪನೆ ಬಿದ್ದರು. ರಾಯರ ಸ್ನೇಹಿತರು, ಪರಿವಾರ ಬಹಳವಿತ್ತು. ಅವರ ತಮ್ಮನಿಗೂ, ಇಂಗ್ಲೆಂಡಿನ

ಲ್ಲಿದ್ದ ವಿಜಯನಿಗೂ, ನಾರಾಯಣರಾಯರಿಗೂ ತಂತಿಗಳು ಹೋದವು. ಮರುದಿನ ಉತ್ತರ ಕ್ರಿಯೆಗಳು ನಡೆದು ಹೋದವು.

ಒಂದು ವಾರದ ವರೆಗೂ ಸತ್ತ ರಾಜಾರಾಯರ ಹಾವಳಿ ತಪ್ಪಲಿಲ್ಲ ಪತ್ರಿಕೆಗಳಲ್ಲಿ. ಜಯರಾಮನ ಮೇಲೆ ಅಷ್ಟು ಪರಿಣಾಮವಾಗಲಿಲ್ಲ. ಮುರಲಿಗೆ ದಿಗಿಲುಬಡಿಯಿತು ತನ್ನ ಮುಂದಿನ ಪರಿಸ್ಥಿತಿಯ ಬಗ್ಗೆ. ಆದರೆ ಗಂಗೂ ಮಂಜೂ ಇಬ್ಬರೂ ಇರುವ ತನಕ ತನಗೇನೂ ಆಗಲಾರದೆಂದು ನಂಬಿ, ಮಂಜುವನ್ನು ನೆರಳಿನಂತೆ ಆಶ್ರಯಿಸುತ್ತಿದ್ದ. ಇವನ ಓಡಾಟ, ಪರಿದಾಟ, ಜಯರಾಮನಿಗೆ ಸರಿಬೀಳುತ್ತಿರಲಿಲ್ಲ. ಯಾರಿಗೆ ಹೇಳಬೇಕು ? ಹೇಗೆ ಹೇಳಬೇಕು ? ಗಂಗೂನೇ ಮನೆಯ ಒಡತಿಯಾದಳು. ಮೊದಲಿನ ಗಂಗತ್ತೆಯ ಸ್ಥಿತಿ ಬದಲಾಗಿ, ಗಂಗತ್ತೆ ಎಲ್ಲರಿಗೂ ಅತ್ತೆಯಾದಳು. ರಾಯರ ಸೊಂಟದ ಬೀಗದ ಕೈ ಮಂಜುವಿನ ಕುಚ್ಚೊ ಕೂಡಾ ಆಕೆಯ ಕೈ ಸೇರಿತು. ಬಾಯ್ತಿ ಅಬ್ಬರ ಬಿರುಸಾಯಿತು. ಎಲ್ಲಿ ಅಡಗಿತ್ತೋ ಏನೋ ಒಂದು ದರ್ಪ, ಠೀವಿ ಬಂದುಬಿಟ್ಟವು ಆಕೆಗೆ. ಅಧಿಕಾರಲಾಲಸೆ ದಿನೇ ದಿನೇ ಹೆಚ್ಚಾಗುತ್ತಿತ್ತು. ಏಕಾದಶಿ, ಪಾರಾಯಣ, ವ್ರತ, ಎಲ್ಲವೂ ಮುರಿದುಬಿದ್ದವು. ಮಂಜುವಿಗಾದರೂ ಅಷ್ಟೇ ಬೇಕಾಗಿತ್ತು. ಮುರಲಿಯಂತೂ ಚಿಕ್ಕಮ್ಮನ ಬಳಿ ಸವಿಮಾತಾಡುತ್ತಾ ಬೇಕು ಬೇಕಾದಷ್ಟು ದುಡ್ಡು ಎಳೆಯುತ್ತಾ ಆನಂದದಿಂದಿದ್ದನು. ನಾರಾಯಣನನ್ನು ಮಾತ್ರ ಯಾರೂ ಮಾತನಾಡಿಸುವ ಹಾಗೆಯೇ ಇರಲಿಲ್ಲ. ಏನು ಮಾತಾಡಿದರೆ ಏನಿದೆಯೋ ಅವನ ಬಾಯಲ್ಲಿ ಎಂದು ಯಾರೂ ಏನೂ ಎನ್ನುತ್ತಿರಲಿಲ್ಲಿ. ಜಯರಾಮನ ಪರಿಸ್ಥಿತಿ ಮಾತ್ರ ದಿನೇ ದಿನೇ ಹದಗೆಡುತ್ತಿತ್ತು. ನಾರಾಯಣನೊಬ್ಬನೇ ಅವನನ್ನು ಬಹು ವಾತ್ಸಲ್ಯದಿಂದ ಕಾಣುತ್ತಿದ್ದುದು. "ಇದೇನು ರಾಯರೇ, ಇಷ್ಟೇನೆ ಊಟ ಮಾಡೋದು ? ತಗೊಳ್ಳಿ ಈರುಳ್ಳಿ ಪಲ್ಯ ಬಹಳ ಚೆನ್ನಾಗಿದೆ. ಚಟ್ನಿ ಹಾಕಲೇನು?'' ಎಂದು ಆದರಿಸಿ, ಬಲವಂತ ಮಾಡಿ ಬಡಿಸುತ್ತಿದ್ದನು.

ಈ ಮಧ್ಯೆ ಮಂಜು ತುಂಬುಗರ್ಭಿಣಿಯಾದಳು. ಆದರೆ ರಾಮನ ಮನಸ್ಸಿಗೆ ಏನೂ ಸಂತೋಷ ಬರಲಿಲ್ಲ. "ಇದರಿಂದ ಏನೋನೋ ಮುಂದೆ" ಎಂಬ ನಿರಾಶಾಭಾವ ಒಡಮೂಡಿತು. ಗಂಗತ್ತೆಯ ಉಪಚಾರ ಹೆಚ್ಚಾಯಿತು.

ಒಂದು ಬೆಳಗಿನ ಜಾವ ಮಂಜು ಗಂಡು ಕೂಸನ್ನು ಹೆತ್ತಳು. ಜಯ ರಾಮನಿಗೆ ಮೊದಲು ಸುದ್ದಿ ತಂದವನು ನಾರಾಯಣ. ನಂತರ ನರ್ಸ್ ಹೊರ ಬಂದಳು. ನಟನೆಯ ಮುಗುಳು ನಗೆ ನಕ್ಕು ರಾಮ ಮತ್ತೆ ಕೋಣೆ ಸೇರಿದ. ಮುರಲಿಯೇ ಸ್ವತಃ ಇಂಗ್ಲೆಂಡಿಗೆ ತಂತಿಕೊಟ್ಟನು. ಆದರೆ ನಾರಾಯಣ ರಾಯರಿಗೆ ಯಾರು ತಿಳಿಸಬೇಕು ? ಅಡಿಗೆ ನಾರಾಯಣನೇ ಬಂದು, "ರಾಯರೇ, ಊರಿಗೆ ಕಾಗದ" ಎಂದನು. ರಾಮ ಕೆಟ್ಟ ಮುಖದಿಂದ, "ಎಲ್ಲಿಗೂ ಬೇಡ" ಎಂದು ಎದ್ದು ಹೋದನು. "ಹಾಗೆಂದರೇನು ರಾಯರೇ? ಗಂಡು ಮಗುವಾಗಿದೆ. ಕೊಡಿ. ನಾನೇ ಹಾಕಿ ಬರುತ್ತೇನೆ" ಎಂದೆನ್ನುವಷ್ಟರಲ್ಲಿ ಗಂಗ ತ್ತೆಯ ಕಿಡಿಕಾರುವ ಕಣ್ಣುಗಳು ಕಂಡವು. ನಾರಾಯಣ ಹಿಂದೆ ಸರಿದ.

ಹೇಗೇಗೋ ಗಾಳಿ ವರ್ತಮಾನ ಬಂದು ನಾರಾಯಣರಾಯರ ಮನೆಗೂ ತಲುಪಿತು. ಸುಬ್ಬಾಚಾರ್ಯರು ಮುಂಬಯಿಗೆ ವ್ಯಾಪಾರಕ್ಕೆ ಹೋಗಿದ್ದಾಗ ಇವರ ಮನೆಗೂ ಹೋಗಿದ್ದರಂತೆ. ಜಯರಾಮ ಹೆಚ್ಚೇನೂ ಹೇಳಲಿಲ್ಲವೆಂದೂ ಅಡಿಗೆ ನಾರಾಯಣನೇ ಹೇಳಿದನೆಂದೂ ಅವರು ಹೇಳಿ ದರು. ರಾಯರಿಗೆ ಮನಸ್ಸು ಮುರಿದಂತಾಯ್ತು. ಆದರೆ ಶಂಕರಮ್ಮನಿಗೆ ಇನ್ನೂ ಮಗನ ಮೇಲಿನ ಮಮತೆ ಆರಿರಲಿಲ್ಲ. ರಾಯರಿಗೂ ಹಿರಿಯ ಮಗನ ಪುತ್ರ ಸಂತಾನ ನೋಡುವ ಉತ್ಸುಕತೆ ಇದ್ದರೂ ಮನ ಒಡಂಬಡುವಂತಿರ ಲಿಲ್ಲ. "ನೋಡಿದೆಯೇನೆ ಶಂಕರಿ, ಪರಿಸ್ಥಿತಿ ಹೇಗೇಗೆ ಬಂದುಬಿಟ್ಟಿತು. ಮೊಮ್ಮಗನನ್ನು ನೋಡುವ ಪುಣ್ಯ ನಮಗಿಲ್ಲವೆಂದೇ ಕಾಣುತ್ತೆ, ಗಂಡು ಮಕ್ಕಳಿಂದ" ಎಂದು ನೋವಿನ ಉಸಿರ್ಗರೆದರು. ಶಂಕರಮ್ಮನಿಗೆ ಮುಂಬಯಿಗೆ ಹೋಗುವ ಇಚ್ಛೆ ಬಲವಾಗುತ್ತಿತ್ತು. ಆದರೆ ರಾಯರ ಅಪ್ಪಣೆ ಇನ್ನೂ ಬಂದಿರಲಿಲ್ಲ. ಅವರಿಗೆ ಮನಸ್ಸೇ ಮುರಿದು, ಮಕ್ಕಳೇ ಇಲ್ಲವೆಂಬ ದೃಢತ್ವ ವನ್ನು ರೂಢಿಸಿಕೊಳ್ಳುತ್ತಿದ್ದರು.

"ಒಂದೆರಡು ದಿನದಮಟ್ಟಿಗೆ ಹೋಗಿ ಬರಲೇ?" ಎಂದಳು ಶಂಕರಮ್ಮ.

"ನಿನಗೆ ವಯಸ್ಸಾದರೂ ಬುದ್ಧಿ ಬರಲಿಲ್ಲ ಶಂಕರಿ. ಅಲ್ಲಾ ಅವನಿಗೇ ನಾವು ಬೇಡವಾಗಿ, ಕಾಗದ ಕೂಡಾ ಬರೆಯದಿರುವಾಗ, ನೀನೇ ಹೋಗು ತ್ತೇನೆ ಅಂತೀಯಲ್ಲಾ? ಮುಂದಿನ ಯೋಚನೆ ಬೇಡವೆ ನಿನಗೆ? ಮನಸ್ಸು ಗಟ್ಟಿ ಮಾಡಿಕೋ. ಮನೆಯಲ್ಲೇ ನಿನ್ನ ಲಕ್ಷ್ಮಿ ಇದ್ದಾಳೆ. ಇವತ್ತಲ್ಲದಿದ್ದರೆ

ನಾಳೆ ಕಂಡೀಯು ಮೊಮ್ಮಗನನ್ನು" ಎಂದರು ರಾಯರು.

"ಎಂಥಾ ಕಟುಕರ ಮನಸ್ಸು ನಿಮ್ಮದು! ಏನೋ ಹುಡುಗತನದಿಂದ ಅವನು ಮದುವೆಗೆ ಬರಲಿಲ್ಲ. ಮಗು ಹುಟ್ಟಿದ್ದಕ್ಕೆ ಕಾಗದ ಬರೆಯಲಿಲ್ಲ ಅನ್ನೋ ಕಾರಣ ಇಟ್ಟುಕೊಂಡು ನಾವೂ ಕೂಡ ಅವನ ಹಾಗೇ ಸಿಟ್ಟು ಮಾಡಿಕೊಂಡು ಕೂಡಬೇಕೆ? ಇವತ್ತಲ್ಲದಿದ್ದರೆ ನಾಳೆ ಬುದ್ಧಿ ಬಂದೀತು. ಲಕ್ಷ್ಮಣರಾಯರನ್ನ ಕರೆದುಕೊಂಡು ಹೋಗಿ ಬರುತ್ತೇನೆ ಎರಡು ದಿವಸ. ಇನ್ನು ರಾಯರು ಏನೂ ಮಾಡುವ ಹಾಗಿರಲಿಲ್ಲ. ಬೇಡವೆಂದರೆ ಕೇಳು ವಂತಿಲ್ಲ. ಕೊನೆಗೆ ಶಂಕರಮ್ಮ ಲಕ್ಷ್ಮಣರಾಯರೊಂದಿಗೆ ಮುಂಬಯಿಗೆ ಬಂದಿಳಿದರು.

ಮನೆಗೆ ಹೋದಾಗ ಹೊರಬಾಗಿಲಲ್ಲಿ ಕಣ್ಣಿಗೆ ಬಿದ್ದವನು ನಾರಾಯಣ. ಅವನಿಗೆ ಆಶ್ಚರ್ಯ. "ಬನ್ನಿಯಮ್ಮ ಒಳಕ್ಕೆ" ಎಂದು ಆದರಿಸಿ ಒಳಗೆ ಕರೆದುಕೊಂಡು ಹೋದ. ಗಂಗೂ, ಮಂಜೂ ಇಬ್ಬರೂ ಕೋಣೆಯೊಳಗೇ ಕುಳಿತಿದ್ದರು. ನಾರಾಯಣ ವಾರ್ತೆ ಕೊಟ್ಟ ಮೇಲೆ ಅವರು ಅನುಭವಿಸುತ್ತಿದ್ದ ಹಾಸ ಮರೆಯಾಯಿತು. ಮಂಜುವಿಗೆ ಜಯರಾಮನೇ ಕಾಗದ ಬರೆದಿರಬೇಕೆಂದು ಭಾವನೆಯಾಯಿತು. ಶಂಕರಮ್ಮ ಒಳಕ್ಕೆ ಬಂದರೂ ಗಂಗುವಾಗಲಿ, ಅಥವಾ ಮಂಜುವಾಗಲಿ "ಬನ್ನಿ" ಎನ್ನಲಿಲ್ಲ. ಶಂಕರಮ್ಮ ಹೋಗಿ ಮಗುವಿಗೆ ತಂದಿದ್ದ ಒಂದು ಉಣ್ಣೆಯ ಕುಲಾವಿ, ಕಾಲುಚೀಲ, ಒಂದು ಸಣ್ಣ ಅಂಗಿ, ಚಿಕ್ಕ ಉಂಗುರವನ್ನು ತೊಟ್ಟಿಲಲ್ಲಿ ಇಟ್ಟು, ಮಲಗಿದ್ದ ಮಗುವನ್ನು ಮುದ್ದಿಸಿದಳು. ಮಂಜು ತಟಕ್ಕನೆ ಮಗುವನ್ನು ಎತ್ತಿಕೊಂಡಳು. ನಿದ್ರೆಯಿಂದ ಎದ್ದ ಮಗು ಒಂದೇ ಸಾರಿಗೆ ಅಳಲಾರಂಭಿಸಿತು.

''ಯಾಕಳಿಸುತ್ತೀಯಮ್ಮ ಮಗೂನ, ಕೊಡು ಇಲ್ಲಿ'' ಎಂದಳು ಶಂಕರಮ್ಮ.

''ನಿಮ್ಮದೇನು ಇದೆ ಇಲ್ಲಿ ಬರಲಿಕ್ಕೆ? ಹೇಳದೆ ಕೇಳದೆ'' ಎಂದು ಗಂಗೂ ಮಗುವನ್ನು ಎತ್ತಿಕೊಂಡು ಹೊರಗೆ ಬೇರೆ ಕೋಣೆಗೆ ಹೋದಳು. ಮಂಜು ಮಚ್ಛರದಾನಿಯನ್ನು ರಭಸದಿಂದ ಇಳಿಬಿಟ್ಟುಕೊಂಡು ಮುಖ ಮುಚ್ಚಿ ಮಲಗಿದಳು. ಶಂಕರಮ್ಮನಿಗೆ ಮುಖಕ್ಕೆ ಹೊಡೆದಂತಾಯ್ತು. ಆದರೂ ಮಗುವನ್ನು ನೋಡಿದ ಸಂತೋಷದಿಂದ ಅದು ಅಷ್ಟಾಗಿ ನೋಯಿ

ಸಲಿಲ್ಲ.

"ಬರುತ್ತೀನಮ್ಮ ಹಾಗಾದರೆ. ಎಲ್ಲಿ ಕುಂಕುಮದ ಬಟ್ಟಲು ಕೊಡು ಇಲ್ಲಿ" ಎಂದಳು ಶಂಕರಮ್ಮ ಸೊಸೆಗೊಮ್ಮೆ ಹರಸಲೋಸುಗ.

"ಕುಂಕುಮವೂ ಇಲ್ಲ, ಏನೂ ಬೇಡ, ಹೋಗಿ ಸಾಕಿನ್ನು" ಎಂದು ಮುಸುಕಿನಿಂದಲೇ ಗುಡುಗಿದಳು.

"ಹಾಗನ್ನಬಾರದಮ್ಮ ಮುತ್ತೈದೆಯರು" ಎಂದಳು ಶಂಕರಮ್ಮ. ಮಂಜು ಸುಮ್ಮನಾದಳು. ಶಂಕರಮ್ಮ ಹೆಜ್ಜೆಯನ್ನು ಕಿತ್ತಿಡುತ್ತ ಕೋಣೆ ಯಿಂದ ಹೊರಬೀಳುವಷ್ಟರಲ್ಲಿ ಜಯರಾಮನೂ ಬಂದ. ಮದುವೆಗೆ ಕರೆ ಯದ ತಾಯಿ ಈಕೆ. ತಾನು ಹೇಳದೆ ಕೇಳದೆ ಬಂದಿದ್ದಾಳಲ್ಲ ಎಂಬ ರೋಷ. ಅದನ್ನು ಇನ್ನೂ ಹೆಚ್ಚಿಸುವಂತೆ, ಶಂಕರಮ್ಮನೇ ವಾತ್ಸಲ್ಯದಿಂದ, "ರಾಮೂ" ಎಂದಳು. ಮದಿಸಿದ ಸಿಂಹದಂತೆ ಒಂದೇ ಸಾರಿಗೆ ಹಿಂದಿರುಗಿ ಶಂಕರಮ್ಮನನ್ನು ದುರದುರನೆ ನೋಡುತ್ತ "ಹೊರಡು ಇಲ್ಲಿಂದ. ಬಾ ಎಂದು ಹೇಳಿದವರಾರು ನಿನಗೆ?" ಎಂದು ಭರಭರನೆ ಒಳಕ್ಕೆ ಹೊರಟು ಹೋದನು. ಶಂಕರ ಮ್ಮನಿಗೆ ದಿಗ್ಭ್ರಮೆಯಾಯಿತು. ಲಕ್ಷ್ಮಣರಾಯರು ಹೊರಗಡೆ ಕುಳಿತಿದ್ದರು. ಶಂಕರಮ್ಮನ ಅಳುವ ಧ್ವನಿಯನ್ನು ಕೇಳಿ ಒಳಗೆ ಬರಬೇಕೋ ಬೇಡವೋ ಎಂಬ ಯೋಚನೆಯಿಂದ ಹೊರಗಡೆಯೇ ಚಡಪಡಿಸಿ ಕೊನೆಗೆ "ಶಂಕರಮ್ಮ, ಬನ್ನಿ ಹೋಗೋಣ" ಎಂದರು. ಶಂಕರಮ್ಮ ಮುಖ ಒರಸಿಕೊಂಡು ಹೊರ ಬಿದ್ದರು. ದುಃಖವನ್ನು ನುಂಗಿಕೊಂಡು ಲಕ್ಷ್ಮಣರಾಯರಿಗೆ ಬೈದದ್ದು ಮಾತ್ರ ವಷ್ಟೇ ಕೇಳಿತ್ತು. "ಆಯಿತು ಅಳಬೇಡ ಬನ್ನಿ. ನೀವಾಗಿಯೇ ಮಾಡಿ ಕೊಂಡದ್ದು. ಇಂಥ ಮಕ್ಕಳಿದ್ದೇನು ಇಲ್ಲದಿದ್ದರೇನು?" ಎಂದು ಸಮಾಧಾ ನೋಕ್ತಿಯಿಂದ ಮನೆಯಿಂದ ಹೊರಬಿದ್ದರು.

ಊರಿಗೆ ಬಂದಾಗ ಶಂಕರಮ್ಮನ ಗೆಲುವಿನ ಮುಖ ಹೋಗಿತ್ತು. ಯಾತನೆಯ ಮುಖವನ್ನು ನಾರಾಯಣರಾಯರು ನೋಡಿದರು. ಆದರೂ ಅವರಿಗೆ ಅರ್ಥವಾಗಲಿಲ್ಲ. ಸಂಜೆಯ ತಿರುಗಾಟಕ್ಕೆ ಹೋಗಿದ್ದಾಗ ಎಲ್ಲ ವನ್ನೂ ಸವಿಸ್ತಾರವಾಗಿ ಲಕ್ಷ್ಮಣರಾಯರು ತಿಳಿಯಪಡಿಸಿದರು. ನಾರಾಯ ಣರಾಯರಿಗೆ ವಿಪರೀತ ಕೋಪ ಬಂತು. ಬೇಡವೆಂದರೂ ಹೋಗಿ ತನಗೆ ಅವಮಾನವಾಗುವುದಿರಲಿ, ತನಗೂ ಅಪಮಾನ ತಂದಳಲ್ಲಾ ಎಂದು ಉರಿದು

ರಿದು ಬೆಂಕಿಯಾಗಿ ಮನೆ ಬಂದು ಸೇರಿದರು.

ನಾರಾಯಣರಾಯರ ಉಗ್ರ ರೂಪ ಕಂಡು ಸೀತೆಗೇಕೋ ಭಯವಾಯಿತು. ಶಂಕರಮ್ಮ ಒಳಕೋಣೆಯಲ್ಲಿ ಇನ್ನೂ ಅಳುತ್ತಲೇ ಇದ್ದರು. ರಾಯರು ಗುಡುಗಿದರು: ‘‘ಎಲ್ಲಿದ್ದಾಳೆ ಆಕೆ ?’’.

ಸೀತೆಯು ನಡುಗುವ ಧ್ವನಿಯಿಂದ, “ಒಳಗಿದ್ದಾಳೆ. ಅಡಿಗೆ ಮಾಡುತ್ತಿದ್ದಾಳೆ” ಎಂದಳು. ರಾಯರು ವಾಕಿಂಗ್‌ಸ್ಟಿಕ್ ಹಿಡಿದುಕೊಂಡೇ ಒಳಹೊಕ್ಕು, ಅಡಿಗೆ ಮಾಡುತ್ತಾ ಒಲೆಯ ಮುಂದೆ ಅಳುತ್ತಿದ್ದ ಶಂಕರಮ್ಮನಿಗೆ, ತಮ್ಮ ಒರಟು ದೊಣ್ಣೆಯಿಂದ ಪರಿವೆ ಇಲ್ಲದೆ ಎರಡು ಹೇರಿದರು. “ಆಯ್ಯೋ” ಎಂಬ ಆರ್ತನಾದವನ್ನು ಕೇಳಿದ ಸೀತೆಯ ಎದೆ ಹಾರಿತು. ಬೇಗನೇ ಅವಳು ಅಡಿಗೆ ಮನೆಗೆ ಬಂದು ತಂದೆಯ ಕೈಲಿದ್ದ ದೊಣ್ಣೆಯನ್ನು ಕಿತ್ತುಕೊಂಡು, “ಇದೇನಪ್ಪಾ ಹುಚ್ಚು” ಎಂದಳು. ಶಂಕರಮ್ಮ ರಾಯರ ಕಾಲಮೇಲೆ ಬಿದ್ದಿದ್ದರು. ರಾಯರು ಅದೇ ಕೋಪದಲ್ಲಿ, “ರಾಕ್ಷಸಿ, ಬೇಡವೆಂದರೂ ಹೋಗಿ ನನ್ನ ಮನೆಯ ಮರ್ಯಾದೆ ಹಾಳು ಮಾಡಿದೆ ’’ ಎಂದು ಕಾಲು ಒದೆದ ರಭಸಕ್ಕೆ ಶಂಕರಮ್ಮ ಅತ್ತ ಬಿದ್ದಳು. ರಾಯರು ಭರಭರನೆ ಹೋಗಿ ತಮ್ಮ ಮಂಚದ ಮೇಲೆ ಬಿದ್ದುಕೊಂಡರು.

ಕಾಯಿಲೆಯಿಂದ ಚೇತರಿಸಿಕೊಳ್ಳುತ್ತಿದ್ದ ರಾಯರು ದೌರ್ಬಲ್ಯದಿಂದ ನರಳುತ್ತಿದ್ದರು. ಈ ಅಪಘಾತದ ದೆಸೆಯಿಂದ ಅವರ ನಿರ್ಬಲ ಹೃದಯಕ್ಕೆ ಪೆಟ್ಟು ತಗಲಿತು. ರಾತ್ರಿಯೆಲ್ಲಾ ಎದೆಯ ನೋವಿನಿಂದ ನರಳುವ ಧ್ವನಿ ಕೇಳಿ ಸೀತೆಯೇ ಓಡಿಹೋಗಿ ಲಕ್ಷ್ಮಣರಾಯರನ್ನೂ, ಸುಬ್ಬರಾಯರನ್ನೂ ಕರೆತಂದಳು. ಎದೆಗೆ ಕಾವು ಕೊಟ್ಟದ್ದಾಯ್ತು. ಬೆಳಗಿನ ಝಾವದ ಹೊತ್ತಿಗೆ ರಾಯರಿಗೆ ಸ್ವಲ್ಪ ಜೊಂಪು ಹಿಡಿದಂತಾಯ್ತು. ಶಂಕರಮ್ಮ ತನ್ನ ಹೊಡೆತದ ನೋವು ಮರೆತು, ಪತಿ ಸೇವೆಗೆ ತೊಡಗಿದರು. ಆದರೆ ಆಕೆಯ ಕಣ್ಣೀರು ಒಂದೇ ಸಮನೇ ಧಾರಾಕಾರವಾಗಿ ಹರಿದಿತ್ತು. ತನ್ನ ತಾಳಿಯೊಂದು ಗಟ್ಟಿಯಿದ್ದರೆ ಸಾಕೆಂದು, ದೇವರ ಮನೆಯ ಸತ್ಯನಾರಾಯಣನಿಗೆ ಹರಕೆ ಹೊತ್ತಳು. ನಾರಾಯಣರಾಯರು ಶಂಕರಮ್ಮನ ಮುಖ ಕಂಡ ಕೂಡಲೇ ಮುಖ ಕಿವಿಚಿಕೊಳ್ಳುತ್ತಿದ್ದರು. ಒಮ್ಮೊಮ್ಮೆ ಪ್ರಯಾಸದಿಂದ ‘‘ಎಲ್ಲಕ್ಕೂ ನೀನೇ ಕಣೇ ಕಾರಣ. ಅನುಭವಿಸು ’’ ಎನ್ನುತ್ತಿದ್ದರು. ಮತ್ತೊಮ್ಮೆ

ಕೋಪದಿಂದ ಬಾಯಿಕಟ್ಟಿ ನೆಲೆಯಿಲ್ಲದೆ ಏನೇನೋ ನುಡಿಯುತ್ತಿದ್ದರು. ಶಂಕರಮ್ಮ ಕಣ್ಣೀರೊರಸುತ್ತಾ, "ನನಗೇನು ತಿಳಿದಿತ್ತು ಇದೆಲ್ಲಾ. ಮಕ್ಕಳ ಒಳ್ಳೆಯದಕ್ಕೆ ಮಾಡಿದರೆ, ಹೀಗೆ ತಿರುಗುತ್ತೆ ಅನ್ನೋದು" ಎಂದು ಬಿಕ್ಕಿ ಬಿಕ್ಕಿ ನುಡಿಯುತ್ತಿದ್ದರು.

ಒಂದು ಸಾಯಂಕಾಲ ರಾಯರ ಸ್ಥಿತಿ ಉಗ್ರವಾಗುತ್ತಾ ಬಂತು. ಉಸಿರಾಡುವುದು ಬಹಳ ಪ್ರಯಾಸವಾಯಿತು. ಮತ್ತೊಂದು ಕ್ಷಣಕ್ಕೆ ಜ್ಞಾನ ತಪ್ಪಿತು. ಶಂಕರಮ್ಮನ ಎದೆ ಮನಸ್ಸು ಬಿರುಗಾಳಿಗೆ ಸಿಕ್ಕ ತರಗೆಲೆಯಂತಾಯಿತು. ಎಷ್ಟೋ ಹೊತ್ತಿನ ಆರೈಕೆಯಾದ ಮೇಲೆ ರಾಯರಿಗೆ ಸ್ವಲ್ಪ ಜ್ಞಾನ ಬಂತು. "ರಾಮ್ಹಾ, ರಾಮೂ ಬಂದಿದ್ದಾನೇನು!" ಎಂದರು. ಲಕ್ಷ್ಮಣರಾಯರು "ಏನಿದು ಮಾತು ? ನಿನ್ನ ಮಗ ರಾಮ ಇಲ್ಲಿಗೆ ಬಂದಾನೆ ? ಸುಮ್ಮನಿರಪ್ಪಾ. ಹೆಣ್ಣುಮಕ್ಕಳು ಹೆದರುತ್ತಾರೆ" ಎಂದರು.

"ರಾಜನಾದರೂ ಬರಬಾರದೇ ?"

"ಬರುತ್ತಾನಪ್ಪ ಈಗ. ನೀನು ಸುಮ್ಮನೆ ಮಲಗು. ಹಾಗೆಲ್ಲಾ ಮಾತಾಡಬಾರದು" ಎಂದು ಸುಬ್ಬರಾಯರು ಸಮಾಧಾನ ಮಾಡಿದರು. ರಾಯರು ಅತಿ ಕಷ್ಟದಿಂದ ಉಸಿರೆಳೆಯುತ್ತಾ, "ಲಕ್ಷ್ಮಣ, ನಾನೇನೂ ಬದುಕುವಂತಿಲ್ಲಪ್ಪ. ಎಲ್ಲಿ ಗಂಗೋದಕ ತಂದು ಬಿಟ್ಟು ಬಿಡಿ. ಎಲ್ಲಾ ನೀವೇ ನೋಡಿಕೊಳ್ಳಬೇಕು. ಸೀತೂ, ನೀರು, ನೀ........ರು" ಎಂದರು. ಅಲ್ಲಿಗೆ ಮಾತು ನಿಂತಂತಾಯ್ತು. ಕಣ್ಣೀರು ಹಾಕುತ್ತಾ ಸೀತೆ ಎರಡು ಗುಟುಕು ನೀರು ಬಿಟ್ಟಳು. ಶಂಕರಮ್ಮ ಇನ್ನೇನು ನೀರು ಬಿಡಬೇಕು ಎನ್ನುವಷ್ಟರಲ್ಲಿ ರಾಯರ ತಲೆ ಎಡಕ್ಕೆ ವಾಲಿತು. ಮತ್ತೆ ತಿರುಗಲಿಲ್ಲ. ಶಂಕರಮ್ಮ ಧೊಪ್ಪನೆ ಬಿದ್ದಳು. ತಂತಿಗಳಾಗಲೇ ಹೋಗಿದ್ದವು ರಾಮನಿಗೆ. ಇಲ್ಲಿಯ ವರೆಗೂ ಅವನಿಗೆ ಕಾದರು. ಆದರೆ ಬರಲಿಲ್ಲ. ಮಾರನೆಯ ಬೆಳಗಿನ ವರೆಗೂ ಕಾದು ನೋಡಿದರು. ಲಕ್ಷ್ಮಣರಾಯರೇ, "ಸುಬ್ಬು, ಆತ ಬರುವುದಿಲ್ಲ ನಡೆಯಪ್ಪ. ಮಕ್ಕಳಿದ್ದ ಮನೆ, ಎಲ್ಲಾ ಮುಗಿಸಿ ಬಿಟ್ಟರಾಯಿತು" ಎಂದು ಅಂತ್ಯ ಕ್ರಿಯೆಗಳನ್ನು ಮುಗಿಸಿದರು. ಮುಂಬಯಿಗೆ ಹೋದ ತಂತಿ ರಾಮನ ಕೈಸೇರಲಿಲ್ಲ. ಮಂಜುವಿನ ಕೈಯಲ್ಲಿ ಮುಕ್ತಾಯವಾಯಿತು. ಮೂರು ತಂತಿಗಳೂ ಮರೆಯಾದವು. ಆದರೆ ರಾಮನಿಗೆ ಸ್ವಲ್ಪ

ಕಳವಳವಾದರೂ, ಅವನ ಮನೋಸ್ಥಿತಿಯೇ ಸ್ವಸ್ಥವಿಲ್ಲದ್ದರಿಂದ ಏನಾದ ರೇನು ಎಂಬ ಭಾವವಿತ್ತು.

ನಾರಾಯಣರಾಯರು ಊರಿನವರೆಲ್ಲರಿಗೂ ಬೇಕಾದವರಾದ್ದರಿಂದ ಜನಸಂದಣಿ ವಿಪರೀತವಾಗಿತ್ತು. ಅವರ ಸೌಜನ್ಯ, ಸರಳತೆಗಳಿಗೆ ಬೆರಗಾಗಿದ್ದ ಜನ ಕಣ್ಣೀರು ಹಾಕಿತು. ಅವರ ಕಚೇರಿಯ ಗುಮಾಸ್ತೆ ಮೊದಲಾಗಿ, ಮಾಮಲೇದಾರರ ವರೆಗೂ ಅವರ ಅಂತ್ಯಕರ್ಮದಲ್ಲಿ ಭಾಗವಹಿಸಿದ್ದರು. "ನನ್ನ ಬಲಗೈಯೇ ಬಿದ್ದಂತಾಗಿದೆ" ಎಂದರು ಮಾಮಲೇದಾರರು. "ರಾಜನಂಥಾ ದಣಿ ಹೋದನಪ್ಪ" ಎಂದು ಕಚೇರಿಯ ಹಿರಿಯ ಜವಾನ ಬೈದ ಕಣ್ಣೀರು ತೆಗೆದ. ಲಕ್ಷ್ಮಣರಾಯರಿಗೂ ಸುಬ್ಬರಾಯರಿಗೂ ಸ್ವತಃ ಅಣ್ಣ ಹೋದಷ್ಟು ದುಃಖವಾಗಿತ್ತು. ಇಷ್ಟು ದಿನವೂ ದಾಯಾದಿಗಳಾದವರು ಇವತ್ತೇಕೋ ಬಂದಿದ್ದರು. ಶಂಕರಮ್ಮ, ಸೀತೆಯ ದುಃಖಕ್ಕೆ ಪಾರವೇ ಇಲ್ಲ. ಶಂಕರಮ್ಮ ಎದೆ ಹೊಯ್ದುಕೊಂಡು ಅಳುವುದನ್ನು ನೋಡಲಾರದೆ ಒಕ್ಕಲಿನ ಹೆಣ್ಣುಮಕ್ಕಳೂ ನೆರೆಯವರೂ ಕಣ್ಣೀರು ಹಾಕುತ್ತಿದ್ದರು. ಸೀತೆ ನೇರವಾಗಿ ಅಳುತ್ತಿದ್ದಳು. ಮೂರನೆಯ ದಿನದ ಸಂಜೆಯ ಹೊತ್ತಿಗೆ ನಾರಾಯಣರಾಯರ ದಹನ ಮುಗಿಯಿತು.

ಲಕ್ಷ್ಮಣರಾಯರೂ ಸುಬ್ಬರಾಯರೂ ಇನ್ನು ಸಾಲಸೋಲಗಳ ವಿಚಾರ ತೆಗೆದರು. ರಾಯರ ಹೆಸರಿನಲ್ಲಿದ್ದ ಎರಡು ಸಾವಿರ ರೂಪಾಯಿ ಇನ್ಶೂರೇನ್ಸ್ ಹಣಕ್ಕೆ ಅರ್ಜಿ ಮಾಡಿದರು. ಆದರೆ ಹರಿಲಾಲನ ಸಾಲದ ಅಸಲಿಗಿಂತ ಬಡ್ಡಿಯೇ ಹೆಚ್ಚಾಗಿತ್ತು. ರಾಮನ ದುಡಿಮೆಯ ಮೇಲೆ ಆಸೆ ನಿಲ್ಲಿಸಿ ಕೈತುಂಬ ಸಾಲಮಾಡಿ, ಒಳ್ಳೆಯ ಫಲಕೊಡುವ ಆಸ್ತಿಯನ್ನು ಅಡವು ಹಾಕಿದ್ದರು. ಮೊತ್ತ ಸುಮಾರಾಗಿ ಮೂವತ್ತು ಸಾವಿರಕ್ಕೇರಿತ್ತು. ಸೀತೆಯ ಗಂಡನ ಕಡೆಯವರು ಈ ಸಾಲದ ಸುದ್ದಿ ಕೇಳಿ, ನಾರಾಯಣರಾಯರ ಸಂಸ್ಕಾರಕ್ಕೆ ಬಂದವರು. ಅವರ ಸೂತಕ ಮುಗಿಯುವ ಮೊದಲೇ ಊರು ಸೇರಲು ಹವಣಿಸಿದರು. ರಾಮು ಇನ್ನೂ ಬರದಿದ್ದನ್ನು ನೋಡಿದ ಜನ ಬಹಳ ಬೇಸರಗೊಂಡಿತ್ತು. "ಸತ್ತು ಕೆಟ್ಟ ಕಾಲಕ್ಕಾದರೂ ಬರಲಾರನೇ? ಹರಿಶ್ಚಂದ್ರನಂತಹ ತಂದೆಯನ್ನು ಕಳೆದುಕೊಂಡು ಸುಮ್ಮನೇ ಇದ್ದಾನೆ.'' ಎನ್ನುತ್ತಿದ್ದರು.

ಶಂಕರಮ್ಮನ ಕಣ್ಣೀರು ಇನ್ನೂ ಪೂರ್ಣವಾಗಿ ಆರಲಿಲ್ಲ. ಸೀತೆಯೇ

ಧೈರ್ಯ ಮಾಡಿಕೊಂಡು ಮನೆಗೆಲಸವನ್ನು ನೋಡಿಕೊಳ್ಳುತ್ತಿದ್ದಳು. ಲಕ್ಷ್ಮಣರಾಯರಿಗೆ ಬೇರೊಂದೂರಿಗೆ ವರ್ಗವಾಯಿತು. "ಎಚ್ಚರವಿರಲಿ ಶಂಕರಮ್ಮನವರೇ.ಏನಾದರೂ ಬೇಕಾದಲ್ಲಿ ನನಗೆ ತಕ್ಷಣ ಕಾಗದ ಬರೆಯಿರಿ. ಸಂಕೋಚ ಬೇಡ. ಹೋಗಿ ಬರಲೇ'' ಎಂದು ಹೋಗಲಾರದೆ ಬೀಳ್ಕೊಂಡರು. ಸುಬ್ಬರಾಯರು ವಿಷಮಶೀತಜ್ವರಕ್ಕೆ ತುತ್ತಾಗಿ ಹೋಗಿದ್ದರು. ಊರಿನ ತ್ರಿಮೂರ್ತಿಗಳಾಗಿದ್ದ ಮೂರು ಜನವೂ ಹೀಗೆ ದಿಕ್ಕು ಪಾಲಾದರು. ಇಷ್ಟಾದರೂ ರಾಜಾರಾಮನ ಸುಳಿವೇ ಇಲ್ಲ. ದಾಯಾದಿಗಳಿಗಂತೂ ಹೇಳಲಾರದಷ್ಟು ಹಿಗ್ಗು. ಸೀತೆಗೆ ಉರಿದೇಳುತ್ತಿತ್ತು. ಕಡೆಗಂತೂ ಒಂದು ದಿನ ಸಾವಿತ್ರಿಯೊಡನೆ ಜಗಳವಾಡಿ ಬಂದಳಂತೆ. ಸರಿ. ಸಂಜೆಗೆ ಸಿದ್ಧವಾಯ್ತು ರಾಮಾಯಣದ ರಣರಂಗ. ಸಾವಿತ್ರಿಯ ಅಣ್ಣ ನರಸಿಂಹ ಸೀತೆಯ ಮನೆಗೆ ಬಂದು ಬಾಯಿಗೆ ಬಂದಂತೆ ಏನೇನೋ ಮಾತಾಡಿದ. ಸೀತೆಯೂ ತಾಯಿಯ ತಡೆಯಿಂದ ಸುಮ್ಮನಿರುವ ವರೆಗೂ ಸುಮ್ಮನಿದ್ದು ಆ ಮೇಲೆ ಒಂದೇ ಸಾರಿಗೆ ಎರಗಿದಳು. " ನಾಚಿಕೆಯಾಗದೇ ನಿಮ್ಮ ಜನ್ಮಕ್ಕೆ ? ನಾವೇ ತಲೆಮೇಲೆ ಮಣ್ಣು ಹೊಯ್ದುಕೊಳ್ಳುತ್ತಿರುವಾಗ, ಸತ್ತು ಕೆಟ್ಟು ಸುಣ್ಣವಾಗುತ್ತಿರುವಾಗ ಊರಿಗೆ ಊರೇ ಮರುಗುತ್ತಿದ್ದರೂ ಇಂಥಾ ಭೂಪತಿಗಳು ಮನೆಗೆ ಹೆದರಿಸೋಕೆ ಬರೋದಕ್ಕೆ ನಾಚಿಕೆ ಇಲ್ಲ" ಎಂದಳು. ನರಸಿಂಹನಿಗೂ ವಿಪರೀತ ಸಿಟ್ಟು ಬಂತು. ಅವನೂ ತಲೆ ಕೆಟ್ಟು ಮಾತನಾಡುತ್ತಿದ್ದಾಗಲೇ ಶಂಕರಮ್ಮನ ಮಧ್ಯಸ್ತಿಕೆ, ನೆರೆಹೊರೆಯವರ ಬುದ್ಧಿವಾದದಿಂದ ಅಷ್ಟಕ್ಕೇ ಶಾಂತವಾಯ್ತು. ದಿನ ದಿನವೂ ಏನಾದರೂ ಒಂದು ಕಳ್ಳ ನೆವಹಾಕಿಕೊಂಡು ಬಂದು ಮನಸಾರೆ ಬೈಯುವುದು. ಇಲ್ಲಸಲ್ಲದ ಆರೋಪ ಹೊರಿಸುವುದು. ನರಸಿಂಹನ ಕಾರ್ಯಕ್ರಮಗಳಾದುವು. ತೋಳ ಹಳ್ಳಕ್ಕೆ ಬಿದ್ದಿರುವ ಹೊತ್ತು, ಎಲ್ಲರೂ ಕಲ್ಲೆಸೆಯುವರೇ. ಕೆಲವರು 'ಪಾಪ' ಎಂದು ಮರುಗಿದರು. ಅಷ್ಟೇ.

ಶಂಕರಮ್ಮನ ಗ್ರಹಚಾರ ಪರೀಕ್ಷೆಯು ದಿನ ದಿನಕ್ಕೂ ಕಠಿನವಾಗಹತ್ತಿತು. ಹುಡುಗಿಯನ್ನು ಮನೆಯಲ್ಲಿಟ್ಟು ಕೊಂಡಿರುವುದೊಂದು ಅಪರಾಧವೆನ್ನುವಷ್ಟು ವಿಪರೀತಕ್ಕೆ ಬಂತು. ಇವೆಲ್ಲವನ್ನೂ ಮೀರಿದ ಕಾಠಿಣ್ಯ ಹರಿಲಾಲನದು. ದಿನಬೆಳಗಾದರೆ ಮನೆಯ ಮುಂದೆ ಹಾಜರ್. ಯಾವುದೋ

ತಿಳಿಯದ ಭಾಷೆಯಲ್ಲಿ ಮಾತನಾಡುತ್ತಿದ್ದುದರಿಂದ ಶಂಕರಮ್ಮನಾಗಲಿ, ಸೀತೆಯಾಗಲಿ ಮಾತನಾಡುತ್ತಿರಲಿಲ್ಲ. ಕೊನೆಗೊಂದು ದಿನ ಹರಿಲಾಲನೂ ರೇಗಿ ಹೇಳಿ ಬಿಟ್ಟನು. "ನಿಮ್ದೂ ಬಾಕಿ ಬರಲೇಬೇಕು ಇವತ್ತು. ಇಲ್ಲಾಂದ್ರೆ, ನಾಳೀಗೆ ಹರಾಜಿಗೆ ಸಿದ್ಧರಾಗಿ. ಏಳೂವರೆ ಸಾವಿರ. ಮೊದಲಿಂದು ಎರಡು ಸಾವಿರ ಬಡ್ಡೀ ಇಲ್ಲವೇ ಇಲ್ಲ." ಎಂದು ಕೊನೆಯ ಎಚ್ಚರಿಕೆಕೊಟ್ಟು ಹೋದ. ಮೂರನೆಯ ಬೆಳಗ್ಗೆ ಮನೆಯ ಮುಂದೆ ಇಬ್ಬರು ಪೈಲವಾನರು ಸಿದ್ಧ. ಒಬ್ಬನಂತೂ ಸಕಲ ಶಾಸ್ತ್ರ ಪ್ರವೀಣ ಹೆಯಾತ್. ಬಾಡಿಗೆ ವಸೂಲು ಮಾಡುವುದರಲ್ಲಿ, ಬಾಕಿ ಸಂಗ್ರಹಿಸುವುದರಲ್ಲಿ ಅವನ ಪ್ರಖ್ಯಾತಿ ಸರ್ವವಿದಿತ. ಆಡುವ ಮಾತುಗಳಾವುವೋ ಯಾವ ಸೀಮೆಯದೋ ಅವನಿಗೆ ಅರ್ಥವಾಗಬೇಕು. ಅವನು ಯಾರ ಮನೆ ಬಾಗಿಲಲ್ಲಿ ನಿಂತರೂ ಬರಿಗೈಯಲ್ಲಿ ಬರುವ ಬಾಬತ್ತೇ ಇಲ್ಲ. ಕಾರ್ಯಸಿದ್ಧಿಯಾಗಲೇ ಬೇಕು. "ಈ ಹೆಣ್ಗಳ್ಗೆ ಎಷ್ಟು ಹೊತ್ತು ಸೇಟಜಿ, ಪಾಂಚ್ ಮಿನಟ್ ಒಳ್ಗೆ ಬಂದ್ಬಿಡ್ತೈತೆ ನೋಡಿ" ಎಂದು ತೋಳು ಏರಿಸಿಯೇ ಹೊರಬಿದ್ದ ದಂಡಯಾತ್ರೆಗೆ.

ಶಂಕರಮ್ಮ ಸೀತೆಯ ಮಾವನ ಮನೆಗೆ ಕಾಗದ ಬರೆಸಿದ್ದರು. ಇನ್ನೂ ಯಾರೂ ಬಂದಿರಲಿಲ್ಲ. ಕೊನೆಗೆ ಅವರೇ ನಿರ್ಧಾರ ಮಾಡಿಬಿಟ್ಟರು- ಮನೆಯನ್ನು ಬಿಟ್ಟು ಹೋಗಬೇಕೆಂದು. "ನಮ್ಮ ಸಾಲಸೋಲಗಳಿಗೆ ನಿಮ್ಮ ಮಾವನವರೇಕಮ್ಮಾ ಕೊಡಬೇಕು? ಇದ್ಯಾವ ನ್ಯಾಯ? ಏನೂ ಬೇಡಾ. ಸಾಲಕ್ಕೆ ಮನೆ ಹೋದಿತಷ್ಟೇ ತಾನೆ. ನಮ್ಮದಾದರೂ ಏನು ಸಂಪತ್ತು" ಎಂದವಳೇ ಗೋಳೋ ಎಂದಳು.

ಸೀತೆ ಎಷ್ಟು ಸಮಾಧಾನ ಮಾಡಿದರೂ ಆಕೆಯ ಗೋಳು ನಿಲ್ಲಲಿಲ್ಲ. ಬೇಗ ಬೇಗನೆ ಕೆಲವು ಸಾಮಾನನ್ನು ಇಬ್ಬರೂ ಕಟ್ಟಿದರು. ಹೊರಗಿನಿಂದಲೇ ಹಯಾತ್ ಸಾಬ ಗುಡುಗಿದ. ಊರಿನವರೆಲ್ಲರೂ ಪಂಚಾಯತಿಗೆ ಬಂದರೂ ಏನೂ ಆಗಲಿಲ್ಲ. ''ಏನು ಕಟುಕ ಇವ ಸೇಟ್‌ಜಿ '' ಎಂದು ಗೋಗರೆದರು. ಎಲ್ಲವನ್ನೂ ಗಾಡಿಗೆ ಹಾಕಿ ಶಂಕರಮ್ಮ ಹೊರಬೀಳುವಷ್ಟರಲ್ಲಿ ಸೀತೆಯ ಮಾವನವರೂ ಎದುರಾದರು. ಮನೆಯ ಮುಂದಿನ ಗುಂಪನ್ನು ನೋಡಿ ಅವರಿಗೆ ಗಾಬರಿ. "ಏನು ಶಂಕರಮ್ಮನವರೇ ವಿಶೇಷ?'' ಎಂದರು. ಶಂಕರಮ್ಮನಿಗೆ ದುಃಖ ಉಕ್ಕಿ ಬಂದು ಗಂಟಲು ಕಟ್ಟಿತು. ಮತ್ತೊಮ್ಮೆ ಕಣ್ಣೀರಿನ

ಉತ್ತರ. ರಾಯರು ಮುಂದೆ ಹೋಗಿ ವಿಚಾರವನ್ನರಿತರು. ಪಂಚಾಯ್ತಿ ಬೇಕಿರಲಿಲ್ಲ. ಮನೆ ಬೇಕಾಗಿತ್ತು. ಆಗಲೇ ಶಂಕರಮ್ಮನ ಹೆಬ್ಬೆಟ್ಟಿನ ಗುರುತು ಕಾಗದದ ಮೇಲೆ ಬಿದ್ದೇ ಬಿಟ್ಟಿತ್ತು ಸ್ವತ್ತಿನ ಪರ ಭಾರೆಯಾಗಿ. ರಾಯರು ಎಲ್ಲವೂ ಕೈಮೀರಿದೆಯೆಂದು ನಿಟ್ಟುಸಿರುಬಿಟ್ಟು ತಲೆಯ ಮೇಲೆ ಕೈ ಹೊತ್ತರು.

"ನಡೆಯಿರಿ ಶಂಕರಮ್ಮ ಮತ್ತಿನ್ನೇನು ? ಎಲ್ಲವೂ ಆದಂತಾಯಿತಲ್ಲ. ನಮಗೆ ಅದರ ಪುಣ್ಯವಿಲ್ಲ. ಅವರ ಋಣ ತೀರಿತು." ಎಂದರು. ಮತ್ತೆ ಶಂಕರಮ್ಮನ ಕಣ್ಣೀರು. ಸ್ವಲ್ಪ ಹೊತ್ತು ಹಯಾತ್ ಸಾಬಿಗೂ ಮಂಕು ಬಡೆಯಿತು. ಇದನ್ನು ನೋಡಿ, ಶಂಕರಮ್ಮ ಕೊನೆಗೊಂದು ಸಾರಿ ಮೇಲಿನಿಂದ ಕೆಳಕ್ಕೆ ತಮ್ಮ ನಿವಾಸ ಸ್ಥಾನವನ್ನು ಕಣ್ತುಂಬ ನೋಡಿ, ತಲೆ ಬಗ್ಗಿಸಿಕೊಂಡು ಗಾಡಿ ಹತ್ತಿಬಿಟ್ಟಳು ಎದೆಗಟ್ಟಿಮಾಡಿ. ಊರ ಜನ ಅರ್ಧದಾರಿಯವರೆಗೂ ಆಕೆಯನ್ನು ಹಿಂಬಾಲಿಸಿತು. ಹಯಾತ್ ಎಂದ—"ಪಾಪ ಯಾರಿಗಾದರೂ ಅಷ್ಟೇ ತಾನೆ, ಮನೆ ಬಿಟ್ಟು ಹೋಗಬೇಕೆಂದರೆ" ಎಂದ. ಹರಿಲಾಲ ಮಾತ್ರ ನಿಶ್ಚಲನಾಗಿದ್ದ. ಇಂಥವೆಷ್ಟೋ ಅವನಿಗೆ!

ಶಂಕರಮ್ಮ ಸೀತೆ ಇಬ್ಬರೂ ದುಃಖ ಮರೆಯಲು ಯತ್ನಿಸುತ್ತಿದ್ದರು. ಶಂಕರಮ್ಮನಿಗೆ ದೇವರ ಚಿತ್ರ ನೋಡಿದ ಕೂಡಲೇ ರಾಯರ ನೆನಪಾಗುತ್ತಿತ್ತು. ನೆನಪಾದಾಗಲೆಲ್ಲಾ ಕಣ್ಣೀರಿನ ಅವಿರತ ಧಾರೆ. ದುಃಖವನ್ನು ಮರೆಸಲು ಯತ್ನಿಸಲು ರಾಯರೂ ಬಹಳ ಪ್ರಯಾಸ ಪಟ್ಟರು. ಕೊನೆಗೆ ಸೀತೆಯ ಶೋಭನದ ವಿಚಾರ ಎತ್ತಿ ಶಂಕರಮ್ಮನ ಒಪ್ಪಿಗೆ ಪಡೆದು ಸಧ್ಯಕ್ಕೆ ಶಾಂತಿಯನ್ನು ನೀಡಿದರು. ಶಂಕರಮ್ಮನ ಕಣ್ಣುಗಳಲ್ಲಿ ದೂರದ ಆಸೆಯೊಂದು ಮೂಡಿ ಮರೆಯಾಯಿತು. ಸೀತೆಯೂ ತಾಯಿಯು ಸಮಾಧಾನಳಾದುದನ್ನು ನೋಡಿ ಸ್ವಲ್ಪ ಹಾಯಾಗಿದ್ದಳು: ಆದರೆ ಅತ್ತೆಯ ಹಿಂಸೆ ಮಾತ್ರ ಆಕೆಗೆ ಏನೂ ಕಡಿಮೆಯಿರಲಿಲ್ಲ. ಶಂಕರಮ್ಮನದೇನೋ ಒಂದೇ ಹೊತ್ತಿನ ಊಟ. ಸೀತೆಯಾದರೋ ಬೆಳಿಗ್ಗೆ ಆರಕ್ಕೆ ಎದ್ದಳೆಂದರೆ ರಾತ್ರಿ ಹತ್ತು ಹನ್ನೊಂದರ ವರೆಗೂ ದುಡಿಯಬೇಕಾಗಿತ್ತು. ಹೊತ್ತು ಗೊತ್ತಿಲ್ಲದ ವೇಳೆಯಲ್ಲಿ ಊಟ. ಸ್ವಲ್ಪ ಹೊತ್ತು ಕೂಡೋಣವೆಂದರೆ ನೆವವಿಲ್ಲದೆ ಗೊಣಗುವ ಅತ್ತೆ, ತಾಯಿಯ ಹತ್ತಿರ ಹೋದರೂ ಬೈಗಳು, ಏನೂ ಕೆಲಸವಿಲ್ಲದೆ

ದ್ದರೂ ಬೈಗಳು. ಆಕೆಗೆ ರೇಗು ಉಕ್ಕಿ ಬರುತ್ತಿದ್ದರೂ ರಾಯರ ಮುಖ ನೋಡಿ ಸುಮ್ಮನಿರುತ್ತಿದ್ದರು. ಆಕೆಯು ಪರವಹಿಸಿ ಎಷ್ಟೋ ಸಲ ಮುಖಕ್ಕೆ ಮಂಗಳಾರತಿ ಮಾಡಿಸಿಕೊಂಡಿದ್ದರು.

"ಲ್ಹೇ ಮನೆಗೆ ಲಕ್ಷ್ಮಿ ಬಂದ ಹಾಗೆ ಬಂದವಳನ್ನು ಯಾಕೆ ಗೋಳಾಡಿಸುತ್ತೀಯೋ !'' ಎಂದರೆ;

"ಹ್ಞ್ಞ, ನಾನೇ ಎಲ್ಲರನ್ನೂ ಗೋಳು ಹುಯ್ಕೋತೇನೆ. ಎಲ್ಲಾ ನನ್ನಿಚ್ಛೆಗೆ ಮಾಡಿಸ್ಕೋತೇನೆ. ಸತ್ತು ಬದುಕಿದೆನೋ ಅನ್ನೋ ಅಷ್ಟು ದುಡಿದರೂ ನನಗೆ ಯಾರೂ ಅನ್ನೋರಿಲ್ಲ. ಧಿಂರಂಗ ಅಂತ ಇರೋ ಹರೇದ ಹುಡುಗಿ ಕೆಲಸ ಮಾಡಿದ್ರೆ ನಿಮ್ಗೆಲ್ಲಾ ಪಾಪ ಅನ್ಸುತ್ತೆ. ಯಾರ್ಗೆ ಯಾಕ ಅನ್ನಬೇಕು. ಎಲ್ಲಾ ನನ್ನ ಹಣೆ ಬರಹ" ಎಂದು ಬಹಳ ಸಲ ಕಣ್ಣೀರು ಸುರಿಸಿ ಗೊಣಗುತ್ತಿದ್ದಳು.

"ಹಾಗಲ್ಲವೆ, ಇನ್ನೂ ಏನೂ ತಿಳಿಯದ ಹುಡುಗಿ. ಸಾವಕಾಶವಾಗಿ ಎಲ್ಲಾ ಮಾಡಿಸಿಕೊಳ್ಳೋದ್ಕೆ ಯಾರು ಬೇಡಾ ಅಂತಾರೆ."

"ಅಯ್ಯೋ ಅಯ್ಯೋ ಏನು ಬೇಡ. ಆಕೇನ ರಗ್ಗು ಹೊದಿಸಿ ಸುಪ್ಪತ್ತಿಗೆ ಮೇಲೆ ಮಲಗಿಸಿ ಬಿಡಿ. ನಾನೇ ಎಲ್ಲಾ ದುಡಿದು ಸತ್ತು ಹೋಗ್ತೇನೆ" ಎಂದು ಮತ್ತಷ್ಟು ಜೋರಾಗಿ ಅಳುತ್ತಿದ್ದಳು. ರಾಯರು ನಿರ್ವಾಹವಿಲ್ಲದೆ ತಲೆ ಕೊಡವಿ ಅಲ್ಲಿಂದ ಮರೆಯಾಗಿ ಬಿಡುತ್ತಿದ್ದರು. ರಾಯರ ಮೇಲಿನ ಕೋಪವೆಲ್ಲ ಸೀತೆಯ ಮೇಲೇ ತೀರಬೇಕು. ಬಡವರ ಮನೆ ಹುಡುಗಿ ಎಂದ ಮೇಲೆ ಅವರ ತಾತ್ಸಾರ ಸೀತೆಯ ನಿದ್ದೆ ಕಣ್ಣೀರಲ್ಲೇ ಆಗಿಹೋಗುತ್ತಿತ್ತು. ಊಟ ಮಾಡಿದರೆ ಮಾಡಿದಳು ಬಿಟ್ಟರೆ ಬಿಟ್ಟಳು. ಆಸೆಯ ಕುಡಿಗಳಂತೆ, ಕಾರ್ಮೋಡದ ಚುಕ್ಕಿಗಳಂತೆ ಯಾವಾಗಲಾದರೊಮ್ಮೆ ಗಂಡನಿಂದ ಪತ್ರ ಬರುತ್ತಿತ್ತು. ಅಷ್ಟರಿಂದಲೇ ಆಕೆಯ ತೃಪ್ತಿ, ಶಾಂತಿ, ಸಮಾಧಾನ. ಅದನ್ನೂ ಅತ್ತೆ ತಡೆಯುವ ಹಾಗಿರಲಿಲ್ಲ. ಗಂಡನಿಗೆ ಏನೇನೋ ದೂರೋದು, ನಮಗೆ ಕಾಗದಾನೇ ಬರೆಯೋ ಹಾಗಿಲ್ಲ. ಈಗಿನ ಕಾಲದ ಹುಡುಗೇರ ಗುಣವೇ ಇಷ್ಟು. ಮನೇಲಿ ಕಾಲಿಡೋದೆ ತಡ, ತಾಯಿ ಮಕ್ಕಳಿಗೆ ದೂರ ಮಡೋದ್ನೆ ಕಾಯ್ದಿರ್ತಾರೆ, ಎಂದು ತನ್ನ ಅಸಮಾಧಾನವನ್ನು ಸೂಚಿಸುತ್ತಿದ್ದಳು. ರಾಯರಿಗೆ ಎಲ್ಲವೂ ಕಂಡರೂ, ಕೇಳಿದರೂ ಸುಮ್ಮನಿರತ್ತಿದ್ದರು, ಇರಬೇ

ಕಾಗಿತ್ತು.

ಯುಗಾದಿ ಹಬ್ಬದ ದಿನ. ಬೆಳಿಗ್ಗೆ ಅಷ್ಟು ಹೊತ್ತಿಗೇ ಸೀತೆ ಎದ್ದು ಬಾಗಿಲು ತೊಳೆದು ರಂಗೋಲಿ ಇಟ್ಟು ಮನೆಯನ್ನೆಲ್ಲಾ ಶೃಂಗಾರ ಮಾಡಿದಳು. ಅತ್ತೆ ಲಕ್ಷ್ಮಮ್ಮ ಇನ್ನೂ ಮಲಗಿಯೇ ಇದ್ದರು. ಶಂಕರಮ್ಮನೇ ಮಗಳು ಆ ಚಳಿಯಲ್ಲಿ ಕೆಲಸ ಮಾಡುವುದನ್ನು ನೋಡಲಾರದೆ, "ಇಷ್ಟು ಹೊತ್ತಿಗೇ ಏಕಮ್ಮ ತೊಂದರೆ ತಗೊಳ್ತೀಯಾ ! ಹೊತ್ತು ಹುಟ್ಟಲಿ" ಎಂದು ಮಮತೆಯಿಂದ ನುಡಿದರು. ಲಕ್ಷ್ಮಮ್ಮ ಮುಸುಕಿನಿಂದಲೇ ಗುಡುಗಿದಳು: "ಇನ್ನು ಹೊತ್ತು ಹುಟ್ಟೋದು ಯಾವಾಗಲೋ ? ಪಾಪ ಕೆಲಸಮಾಡ್ಬೇಕೂ ಅಂದ್ರೆ ಅದೆಲ್ಲಿಂದ ಬರುತ್ತೆ ಕಾಣೆ ಈ ಕನಿಕರ.?" ಶಂಕರಮ್ಮ ಸುಮ್ಮನಾದರು. ರಾಯರೂ ಒಮ್ಮೆ ಕೆಮ್ಮಿದರು. ಮಾತುಗಳು ಅಲ್ಲಿಗೆ ಮುಕ್ತಾಯವಾದುವು.

ಸೀತೆ ಇನ್ನೂ ರಂಗೋಲಿ ಹಾಕುತ್ತಿರುವಾಗಲೇ ಪೋಸ್ಟಮನನೊಬ್ಬ ಬಂದು ಒಂದು ತಂತಿ ವಾರ್ತೆಯನ್ನು ಕೊಟ್ಟ. ಸೀತೆ ನೇರವಾಗಿ ಮಾವನೆಡೆಗೆ ತಕ್ಕೊಂಡು ಹೋದಳು. ಲಕ್ಷ್ಮಮ್ಮ ತಮ್ಮ ಮಲಗುವ ಕೋಣೆಗೆ ಸೀತೆ ಬಂದುದನ್ನು ಸಹಿಸದಾದಳು. "ಇದೇನೇ, ಇಷ್ಟು ಹೊತ್ತಿಗೆ ನಿನ್ನ ಧಾಂದಲೆ ಮನೆ ತುಂಬಾ' ಎಂದು ಮುಖ ಕೆಡಿಸಿದಳು. ಸೀತೆ ಮೆಲ್ಲಗೆ "ಮಾವನವರಿಗೆ ಏನೋ ತಂತಿ ಬಂದಿದೆ, ಕೊಡೋದಕ್ಕೆ ಬಂದೆ" ಎಂದಳು. ರಾಯರು ತಟ್ಟನೆ ಎದ್ದು, "ಏನಮ್ಮಾ ಅದು? ಕೊಡು ಇಲ್ಲಿ' ಎಂದು ತೆಗೆದು ಲಗುಬಗೆಯಿಂದ ಒಡೆದು ನೋಡಿದರು. ಮರುಕ್ಷಣವೇ ಕರುಳು ಹಿಂಡುವ ಕೆಟ್ಟ ಧ್ವನಿಯಿಂದ, "ಅಯ್ಯೋ ಗ್ರಹಚಾರವೆ?'' ಎಂದು ತಲೆಯ ಮೇಲೆ ಕೈ ಹೊತ್ತು ತಲೆದಿಂಬಿಗೆ ಮುಖವಿಟ್ಟರು. ಲಕ್ಷ್ಮಮ್ಮನಿಗೂ ಸ್ವಲ್ಪ ಎದೆ ಧಸಕ್ಕೆಂದಿತು. ಸೀತೆಯೂ ಬೆದರಿ ನಿಂತಳು. ಲಕ್ಷ್ಮಮ್ಮನೆಂದರು: ''ಏನದು ಸರಿಯಾಗಿ ಹೇಳಬಾರದೇ?"

"ಏನೂ ಅಂತ ಹೇಳ್ಬೇಕೆ. ನಮ್ಮ ಮನೆ ದೀಪ ನಂದಿ ಹೋಯ್ತಲ್ಲೇ! ನಿನ್ನೆ ಕೃಷ್ಣಾ ನದಿಯಲ್ಲಿ ಮುಳುಗಿ ಹೋದನಂತೆ ಸತ್ಯ"

"ಅಯ್ಯೋ, ಕಂದಾ" ಎಂದು ಲಕ್ಷ್ಮಮ್ಮನು ಕೂಗಿದಳು. ಶಂಕರಮ್ಮನಿಗೆ ಎಚ್ಚರವಾಯಿತು. ಸೀತೆಯೂ ಮೂಕಳಾಗಿ ನಿಂತಳು. ಶಂಕರಮ್ಮ

ಅಲ್ಲಿಗೆ ಬಂದು "ಏನಾಯ್ತು ಲಕ್ಷ್ಮ್ರಮ್ಮ?" ಎಂದರು. ಸೀತೆಗೆ ಉಕ್ಕಿ ಬಂದ ದುಃಖ ತಡೆಯಲಾರದೆ, "ನನ್ನ ತಾಳಿ ಕಿತ್ತು ಹೋಯಿತಮ್ಮ. ಇನ್ನೇನುಳಿಯಿತು ನನ್ನದು!" ಎಂದು ತಾಯಿಯ ಭುಜದ ಮೇಲೆ ಕುಸಿದಳು.

"ಏನಾಯಿತೆ, ಸೀತೆ?"

ರಾಯರು ಮುಖ ಎತ್ತಿ ಮತ್ತೆ ಎಂದರು. "ನಮ್ಮ ಹುಡುಗ ಕೃಷ್ಣಾನದಿಯಲ್ಲಿ ಈಜುವಾಗ ತೇಲಿ ಹೋದನಂತೆ". ಧ್ವನಿ ಗದ್ಗದವಾಗಿತ್ತು.

ಶಂಕರಮ್ಮನ ಕಿವಿ ನಂಬದಾದವು. ಆಕೆಯ ತಲೆಯೇ ಭುಜದ ಮೇಲೆ ಇದೆಯೆಂಬ ಅರಿವು ಸಹ ಇಲ್ಲದಾಯಿತು. ಸೀತೆಯು ಬಿಕ್ಕಿ ಬಿಕ್ಕಿ ಅಳುವುದು ಮಾತ್ರ ಸ್ಪಷ್ಟವಾಗಿತ್ತು. ಲಕ್ಷ್ಮ್ರಮ್ಮನ ಘೋರಾಟ, ಹುಯಿಲು ಅಸಾಧ್ಯವಾಗಿತ್ತು. ರಾಯರು ತಳಮಳದಿಂದ ಹೊರಗೆ ಎದ್ದು ನಡೆದರು. ನೆರೆಮನೆಯ ರಾಜಮ್ಮ, ಸುಮಿತ್ರಮ್ಮ, ಎಲ್ಲರೂ ಬಂದು ಸೇರಿದರು. ಯಾರು ಏನು ಹೇಳಬೇಕು? ಏನು ಸಮಾಧಾನ ಮಾಡಬೇಕು? ಶಂಕರಮ್ಮನಂತೂ ಮೂಲೆಯಲ್ಲಿ ಕೈ ಹೊತ್ತು ಕುಳಿತು ಬಿಟ್ಟರು. ಸೀತೆಯ ದುಃಖಕ್ಕೆ ಮಿತಿಯುಂಟೆ? ಆಕೆಗೆ ಗಂಡನ ಮುಖದ ಛಾಯೆಯೆ ಮರೆತಂತಾಗಿತ್ತು. ಮದುವೆಯಲ್ಲೇ ಆಕೆ ನೋಡಿದ್ದು. ಮತ್ತೆ ದರ್ಶನವೇ ಇಲ್ಲದಾಯಿತು.

ಊರೆಲ್ಲಾ ಯುಗಾದಿ ಮಾಡುತ್ತಿದ್ದರೆ, ರಾಯರ ಮನೆ ಮಾತ್ರ ಮಸಣವಾಗಿತ್ತು. "ಮುಖಾ ಸಹಿತ ನೋಡದ ಹಾಗಾಯ್ತಲ್ಲಾ' ಎಂದು ಲಕ್ಷ್ಮ್ರಮ್ಮ ಬಾರಿ ಬಾರಿಗೂ ಒರಲುತ್ತಿದ್ದಳು. ರಾಯರಿಗೆ ದಿಙ್ಮೂಢತೆ! ಸ್ನೇಹಿತರು ಬಂದರು. ಏನು ಮಾಡುವುದಿದೆ! ಇನ್ನೇನು ಮುಂದಿನ ವರ್ಷ ಇಂಜಿನಿಯರ್ ಆಗುವನೆಂದು ಎಲ್ಲರೂ ಹಂಬಲಿಸುತ್ತಿರುವಾಗ, ಕಾಲೇಜು ಹುಡುಗರೊಡನೆ ವಿಹಾರಕ್ಕೆ ಹೋಗಿ ತುಂಬಿದ ನದಿಯಲ್ಲಿ ಈಜುವಾಗ ಕೈಸೋತು ರಭಸದ ಪ್ರವಾಹದಲ್ಲಿ ಕೊಚ್ಚಿ ಹೋಗಿ ಬಿಟ್ಟದ್ದ ಸತ್ಯ. ಅವನ ದೇಹದ ಪತ್ತೆಯಾವರೂ ಕಠಿಣವೇ.

ಲಕ್ಷ್ಮ್ರಮ್ಮನ ದುಃಖ,ಕ್ರೋಧ ಎಲ್ಲವೂ ಸೀತೆಯ ಮೇಲೇ ಹೊರಳಿತು. "ಯಾವ ಗಳಿಗೆಯಲ್ಲಿ ಮನೇಲಿ ಕಾಲಿಟ್ಟೆಯೇ? ನಮ್ಮ ಮನೆಯ ಬೆಳಕನ್ನೇ ನುಂಗಿಕೊಂಡು ಬಿಟ್ಟೆ. ಅಯ್ಯೋ ಮಗು. ನಿನ್ನ ನೋಡಿ ವರ್ಷವಾ

ಯ್ತಲ್ಲೋ. ಯಾಕಾದ್ರೂ ನಿನ್ಗೆ ಮದುವೆ ಮಾಡಿದೆನೋ ಈ ಹುಡುಗಿ ಜೋತೇಲಿ? ನುಂಗಿ ಬಿಟ್ಟಳಲ್ಲ. ನೆಗೆದು ಬಿದ್ದು ಹೋಗ" ಎಂದು ಶಪಿಸಿ ಲಟಿಕೆ ಮುರಿದಳು. "ಸಾಲದ್ದಕ್ಕೆ ಈ ಪ್ರಾರಬ್ಧ ಒಂದು ಬೇರೆ ಜೊತೇಲಿ. ಮನೇಗೆ ದಾರಿದ್ರ್ಯ ಬಿಟ್ಟೀತೆ? ಹಾಳಾಗಿ ಹೋಗ. ಗಂಡನ್ನ ನುಂಗ್ಕೊಂಡು ಬಂದು ಇಲ್ಲಿಯೂ ಅನಾಹುತ ಮಾಡಿತು. ಈ ಗೂಬೆ" ಎಂದು ಶಂಕರಮ್ಮನನ್ನು ಸೂಚಿಸಿ ಕಟುವಾಗಿ ನುಡಿದಳು. ಶಂಕರಮ್ಮ ನೀರವವಾಗಿ ಅಳುತ್ತಿದ್ದಳು.

ಲಕ್ಷ್ಮಮ್ಮನ ಚಿತ್ರಹಿಂಸೆ, ಯಮಯಾತನೆ ಇನ್ನು ಮೇರೆ ಮೀರಿದವು ಇನ್ನು ಯಾರ ಬಂಧನವೇನು, ಯಾರ ಇಷ್ಟ, ಇಚ್ಛೆಗಾಗಿ ಇರಬೇಕು ಎಂಬ ಮನೋಭಾವ ಮೂಡಿತು. ಇದ್ದ ಒಬ್ಬ ಮಗ ಹೋದ ಮೇಲೆ ಉಳಿದುದಾವರೂ ಏನು? ದಿನ ಬೆಳಗಾದರೆ ಸೀತೆಗೂ, ಶಂಕರಮ್ಮನಿಗೂ ಮಾತಿನ ಪೂಜೆ ಅವಿರತವಾಗಿ ಸಾಗಿತ್ತು. ಇಬ್ಬರಿಗೂ ಕಣ್ಣೀರಿನಲ್ಲೇ ಸ್ನಾನ, ಪಾನ, ಊಟ. ಮುಟ್ಟಿದ್ದೂ ಬಿಟ್ಟದ್ದೂ ಎಲ್ಲವೂ ಅಪರಾಧಗಳೆ. ಒಂದರ ಹಿಂದೆ ಒಂದು ವಿಚಾರ ಹುಟ್ಟಿಸಿಕೊಂಡು ಲಕ್ಷ್ಮಮ್ಮ ತನ್ನ ಬಾಯಿಗೆ, ಅಸಹನೆಗೆ, ಅಶಾಂತಿಗೆ ಸಮಾಧಾನ ತಂದುಕೊಳ್ಳುತ್ತಿದ್ದಳು. ದಿನವೂ ಲಕ್ಷ್ಮಮ್ಮ ಎನ್ನುತ್ತಿದ್ದಳು:

"ಇನ್ನೂ ಯಾಕೆ ಹಾಗೇ ಬಿಟ್ಕೊಂಡಿದ್ದೀಯಾ ಕೂದಲನ್ನ! ಚೆನ್ನಾಗಿ ಎಣ್ಣೆ ಗಿಣ್ಣೆ ಹಾಕ್ಕೊಂಡು ಹೆರಳ ಹಾಕ್ಕೋ. ಸಿಂಧೂರ ಇಟ್ಕೋ." ಸತ್ತು ತಿಂಗಳಾದರೂ ಯೋಚನೆ ಮಾಡಿದಾಳೆಯೇ ಏನಾದ್ರೂ? ಹಾಗೆ ಇರ್ಬೇಕೂ ಅಂತೇನೋ? ನಿನ್ನ ಕುಣಿತಕ್ಕೆ ಅವರೊಬ್ಬರಿದ್ದಾರಲ್ಲಾ ತಾಳ ಹಾಕೋಕೆ! ಆಗಲಿ ನಡೆಯಿಲಿ. ಏನೇನು ನಡೆಯುತ್ತೋ ನೋಡೋಣ"

ರಾಯರು ಸುಮ್ಮಾನದಿಂದ ಎನ್ನುತ್ತಿದ್ದರು. "ಹಾಗಲ್ಲವೇ ಲಕ್ಷ್ಮಿ ಇನ್ನೂ ವಯಸ್ಸು ಚಿಕ್ಕದು. ಯಾಕೆ ಕೂದಲು ತೆಗೆಸಿ ಅವಲಕ್ಷಣ ಮಾಡ್ಬೇಕು? ಇದ್ದರೇನು ಮಾಡುತ್ತೆ ಬಿಡು. ಹಾಗೆಲ್ಲಾ ಮಾತಾಡಿದರೆ ಚೆನ್ನಾಗಿರೋಲ್ಲ"

"ನಾನೇನು ಅಂದೆ. ತೆಗೆಸಿ ಬಿಡಿ ಅನ್ಲಿಲ್ಲವಲ್ಲ. ಎಣ್ಣೆ ಕೊಡ್ತೀನಿ ಅಂತ ಹೇಳ್ದೆ. ಬರ್ತಾ ಹೂವ್ನೂ ತಗೊಂಡ್ಬನ್ನಿ. ಮುಡ್ಕೊಳ್ಳಿ"

"ಹೀಗೆಲ್ಲಾ ಮಾತಾಡಿದರೆ ಅವಳಿಗೆ ದುಃಖ ಉಕ್ಕುತ್ತೆ. ಬೇಡಾ ಲಕ್ಷ್ಮಿ ಮನೆ ಹೆಣ್ಣು ಮಕ್ಕಳು ಕಣ್ಣೀರು ಹಾಕಬಾರದು"

''ಓಹೋ ಕಣ್ಣೀರು ಹಾಕಿದರೆ ಮನೆ ಹಾಳಾಯ್ತೇನೊ ? ಅದ್ಕೇ ತಾನೆ ಕಾಲಿಟ್ಟ ಆರು ತಿಂಗಳಿಗೇ ಗಂಡನ್ನ ನುಂಗ್ಕೊಂಡ್ಳು"ಎಂದು ಮಾತಿಗೆ ಮುಕ್ತಾಯ ಹಾಡಿ, ಸುಂಟರ ಗಾಳಿಯಂತೆ ಕೋಪದ ರಭಸದಿಂದ ಒಳಕ್ಕೆ ಹೋಗುತ್ತಿದ್ದಳು. ದಿನಕ್ಕೊಮ್ಮೆಯಾದರೂ ಈ ಮಾತು ಬರದಿದ್ದರೆ ಆಕೆಗೆ ಸಮಾಧಾನವಿಲ್ಲ. ಶಂಕರಮ್ಮನಂತೂ ಆಕೆಯ ಬಾಯಲ್ಲಿ ತೀರ ಹೀನಳಾದಳು.

"ಈ ಗೂಬೆಯೊಂದು ಮನೆ ಸೇರ್ಕೊಂಡು ಕೆಲಸಾ ಬೊಗಸೆ ಇಲ್ಲದೆ ದೇವರ ಮುಂದೆ ಕೂತು ಕಣ್ಮುಚ್ಕೋದೋ, ಕಣ್ಣೀರು ಹಾಕೋದೋ ಕಲಿತು ಬಿಟ್ಟಿದೆ. ಚೌರಕ್ಕೆ ಕೂಡಾ ಗತಿಯಿಲ್ಲ ಇದಕ್ಕೆ. ಸಂಜೆಯಾಗುತ್ತಲೂ ಹರಿಕಥೆಯೇ, ಪುರಾಣವೇ ನಡೆಯುತ್ತೆ. ರಾತ್ರಿ ಹೊತ್ತು ಮೀರಿ ಬರೋದು ಮನೆಗೆ. ಎಲ್ಲಾ ಶನಿಗಳು ಮನೆ ತುಂಬಾ. ಇದೇನು ನನ್ನ ಋಣಾನೋ ಅಂತೀನಿ ಇವ್ನೆಲ್ಲಾ ತೀರ್ಸೋಕೆ!''

ಶಂಕರಮ್ಮ ಏನು ಮಾತಾಡಿಯಾಳು? ಮತ್ತೆ ಉಕ್ಕಿ ಬರುತ್ತಿದ್ದ ಕಣ್ಣೀರನ್ನು ಒರಸಿಕೊಳ್ಳುತ್ತಾ ಅಳುತ್ತಿದ್ದಳು. ರಾಯರು ನೋಡಲಾರದೆ:

"ಲೇ ಲಕ್ಷ್ಮಿ ನಿನ್ನ ಬಾಯಿಗೆ ಬೀಗ ಹಾಕ್ಕೋ. ತಲೆಗಿಲೆ ಕೆಟ್ಟಿದೆಯೇನು ನಿನಗೆ ? ಸಿಕ್ಕ ಸಿಕ್ಕ ಹಾಗೆ ಮಾತಾಡಿದರೆ ಏನರ್ಥ ಅದಕ್ಕೆ ? ಅವರೇನೆ ನಿನಗೆ ಮಾಡ್ಬೇಕು? ನಿನ್ದೂ ಕಾಲೊತ್ತಬೇಕೇನು ? ಸುಮ್ಮನೆ ಮಡಿ ಮೈಲಿಗೆ ಮಾಡುತ್ತಿದ್ದರೆ ನಿನ್ನದೇನು ಗಂಟು ಹೋಯಿತು ?'' ಎಂದನ್ನುತಿದ್ದರು.

''ಮನೆಯಲ್ಲಿ ದ್ರಾಕ್ಷಿ, ಬಾದಾಮಿಗಳ ನೈವೇದ್ಯ ಚೆನ್ನಾಗಿ ಚೊಕ್ಕಟವಾಗುತ್ತಿದೆ. ನಿಮಗೇನು ಗೊತ್ತು ?''

ಸರಿ, ಅಲ್ಲಿಂದ ಮತ್ತೆ ಮರೆಯಾಗುವಳು. ಹೀಗೆಯೇ ನಡೆದಿತ್ತು ಸೀತೆಯ, ಶಂಕರಮ್ಮನ ಕಣ್ಣೀರಿನ ದಿನಚರಿ.

ಸೀತೆಗೂ ಈ ನರಕಯಾತನೆ ತಡೆಯುವುದು ಅಸಾಧ್ಯವಾಯಿತು. ಅಲ್ಲದೆ ಈ ಮನೆಯಲ್ಲಿ ತನ್ನದೇನಿದೆ ಎಂಬ ವಿಚಾರವೂ ತಲೆಯಲ್ಲಿ ಸುಳಿ

ಯಿತು. ಹಂಗಿನ ಮನೆಯ ಕೂಳು ನರಕ ಸಮಾನ ಎಂಬ ಪಲ್ಲವಿ ಆಕೆಯ ಕಿವಿಯಲ್ಲಿ ಪಡಿನುಡಿಯುತ್ತಿತ್ತು. ಋಣಾನುಬಂಧ ಹರಿಯಬೇಕು ಎಂಬ ನಿರ್ಧಾರ ಮಾಡಿಬಿಟ್ಟಳು. ತಾಯಿಯ ಒಪ್ಪಿಗೆಯೊಂದು ಬೇಕಲ್ಲ? ಒಪ್ಪಿಗೆ ಬಂದೀತು. ಆಕೆಗಾದರೂ ಏನು ಕಷ್ಟವಿದೆ ಎಂದುಕೊಂಡು ರಾತ್ರಿ ತಾಯಿಯ ಬಳಿ ಮಾತನಾಡಿದರಾಯಿತು ಎಂದು ಸುಮ್ಮನಾದಳು.

ರಾತ್ರಿ ಶಂಕರಮ್ಮನ ಬಳಿ ಸೀತೆ ಕುಳಿತಳು.ಎಂದಿನಂತೆ ಅಂದಿನ ಭಾವ ವಿರಲಿಲ್ಲ. ಶಂಕರಮ್ಮನೇ ಕೇಳಿದಳು; "ಏನು ಸೀತೆ. ಏನೋ ತುಂಬಿ ಕೊಂಡು ಬಂದಿದಂತಿದೆಯಲ್ಲ" ಎಂದಳು. ಸೀತೆಯ ಮುಖಕ್ಕೆ ಕಳೆಯೇ ರಿತ್ತು. ಬಾಯಿಂದ ಉದ್ಗಾರಗಳು ಹೊರಟವು- "ಅಮ್ಮಾ, ಇವತ್ತು ನಾವು ಮನೆ ಬಿಟ್ಟೇ ಬಿಡಬೇಕು." ಶಂಕರಮ್ಮನ ಎದೆ ಹಾರಿತು ಅದನ್ನು ಕೇಳಿ.

"ಹೌದಮ್ಮ ಮುಂದೇನು ?"

"ನಾನೆಲ್ಲವನ್ನೂ ಮಾಡಿದರಾಯಿತಲ್ಲ".

"ಏನು ಮಾಡುತ್ತೀಯಮ್ಮ ಹೆಣ್ಣು ಹೆಂಗಸು?"

"ಮಾಡಿ ತೋರಿಸುತ್ತೇನೆ ನಿನಗೆ, ಹೆಣ್ಣು ಹೆಂಗಸನ್ನು"

"ಕಷ್ಟವಮ್ಮ. ಲೋಕಾಪವಾದ ಬಂದೀತು."

"ಎಂದಿದ್ದರೂ ನಮ್ಮಂಥವರಿಗೆ ಬರಲೇ ಬೇಕು. ಹೆಚ್ಚಿಗೆ ಮಾತು ಬೇಡ ನಡೆ ಹೋಗೋಣ"

"ಎಲ್ಲಿಗೆ ಹೇಳಬಾರದೇ ?"

"ಎಲ್ಲಾ ಹೇಳಲು ಸಮಯವಿಲ್ಲ. ನೋಡಮ್ಮ ನನಗೆ ಹೇಗಿದ್ದರೂ ಮೆಟ್ರಿಕ್ ಆಗಿದೆ. ಇಲ್ಲೇ ಭಾರತೀಯ ವಿದ್ಯಾಭವನದಲ್ಲಿ ಕಸೂತಿ, ಸಂಗೀತ ಮೋಡಂ ಕೆಲಸಕ್ಕೆ ಸೇರಿ ಬಿಡ್ತೇನೆ. ಎಲ್ಲಾ ಸರಿಹೋಗಿ ಬಿಡುತ್ತೆ. ಹ್ಞೂ, ಏಳು. ಹೋಗೋಣ" ಎಂದು ಸದ್ದಿಲ್ಲದೆ ಎಲ್ಲವನ್ನೂ ಗಂಟುಕಟ್ಟಿದಳು. ಲಕ್ಷ್ಮಮ್ಮ ಬಂದರು. ಸೀತೆ ಮಾತಾಡಲಿಲ್ಲ. ಆಕೆಯ ಕೋಪ ನೆತ್ತಿಗೇರಿತ್ತು. ತಾರ ಸ್ವರದಲ್ಲಿ ಗುಡುಗಿದಳು;

"ಎಲ್ಲಿಗೆ ಗಂಟು ಕಟ್ಟಿದಿರಿ.?" ಸೀತೆ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು,

"ಎಲ್ಲಿಗೆ ಹೋದರೆ ನಿಮ್ಮದೇನು? ನಿಮ್ಮ ಮುಖ ತಪ್ಪಿದರೆ ಸಾಕಾ

ಗಿದೆ ನಮಗೆ.''

ಲಕ್ಷ್ಮಮ್ಮ ಅವಕ್ಕಾದಳು. ರಾಯರೂ ಒಳಕ್ಕೆ ಬಂದರು.

''ಏನಮ್ಮಾ ಸೀತೆ ವಿಪರೀತ? ಇಲ್ಲೇ ಇದ್ದು ಬಿಡಿ. ನಮಗಾದರೂ ಯಾರೂ ಇಲ್ಲ." ಎಂದರು. ಸೀತೆಗೆ ಆಗ ಕನಿಕರ ಮೂಡಿತು. ಕಣ್ಣಲ್ಲಿ ನೀರು ತುಂಬಿತು. ''ಇಲ್ಲಾ ಮಾವನವರೇ, ಯಾರಿಗೂ ತೊಂದರೆ ಬೇಡ. ನಿಮ್ಮ ಆಶೀರ್ವಾದವಿಷ್ಟು ಇದ್ದರೆ ಸಾಕು.'' ಎಂದವಳೇ ಮುಂದೆ ನಡೆದು ರಾಯರಿಗೆ ನಮಸ್ಕರಿಸಿ, ''ಬಾರಮ್ಮಾ ಹೋಗೋಣ'' ಎಂದು ಬಾಯ್ತೆರೆದು ನಿಂತಿದ್ದ ಶಂಕರಮ್ಮನನ್ನು ಕರೆದುಕೊಂಡು ಕ್ಷಣದಲ್ಲಿ ಅಲ್ಲಿಂದ ಮರೆಯಾದಳು. ರಾಯರು, ಮರೆಯಾಗುವ ವರೆಗೂ ನೋಡುತ್ತಿದ್ದರು ಬಾಷ್ಪಾಕ್ಷಗಳಿಂದ. ಲಕ್ಷ್ಮಮ್ಮನೂ ಹೌಹಾರಿ ನಿಂತಿದ್ದಳು. ರಾಯರು ''ಇಲ್ಲಿಗೆ ಎಲ್ಲಾ ತಣ್ಣಗಾದಂತಾಯ್ತು'' ಎಂದು ನಿಟ್ಟುಸಿರೆಳೆದರು.

ಇತ್ತ ರಾಮನ ಪರಿಸ್ಥಿತಿ ದಿನದಿನಕ್ಕೂ ವಿಷಮವಾಗಹತ್ತಿತು. ಮಂಜುವಂತೂ ಅವನನ್ನು ಮಾತು ಮಾತಿಗೂ ಹಂಗಿಸುತಿದ್ದಳು. ಊಟಕ್ಕೆ ಕೂಡಾ ಅವನು ಬಂದರೆ ಬಡಿಸುತ್ತಿರಲಿಲ್ಲ. ಗಂಗತ್ತೆಯೂ, ಆಕೆಯೂ, ಮುರಲಿಯೂ ಯಾವಾಗಲೂ ಜೊತೆ. ರಾಮನ ಆಪ್ತ ನಾರಾಯಣನೊಬ್ಬನೇ. ವಿಷಯಗಳನ್ನು ಅವನಿಂದಲೇ ತಿಳಿಯಬೇಕಾಗಿತ್ತು ರಾಮು. ಡ್ರಾಯಿಂಗ ರೂಮಿನ ಬೀಗದ ಕೈ ಕೂಡಾ ಗಂಗತ್ತೆಯ ಕೈಗೇ. ಅವರು ಬರುವುದು ಯಾವಾಗಲೋ ಏನೋ. ರಾತ್ರಿ ಸರಿ ಹೊತ್ತಿನಲ್ಲಿ ಬಂದು, "ಬಾಗಿಲು ತೆಗೆ ನಾರಾಯಣಾ" ಎಂದು ಬೀಗದ ಕೈ ಕುಚ್ಚು ಎಸೆಯಬೇಕು, ಬಾಗಿಲು ತೆರೆಯಬೇಕು. ಅಲ್ಲಿಯ ವರೆಗೂ ರಾಮನಿಗೆ ಜಾಗರಣೆ. ಯಾಕೆ ಎಂದು ಎಲ್ಲಾದರೂ ಕೇಳಿದರೆ, ಅಸಂಬದ್ಧ ಉತ್ತರ. ಮುರಲಿಯೂ ಅವನ ಕೋಪವನ್ನು ಅಳೆಯುವಂತೆ "ಭಾವ, ಇವತ್ತು ಪಿಕ್ಚರ್ ಬಹಳ ಚೆನ್ನಾಗಿತ್ತು. ಸುರೈಯಾದು ಬಹಳ ಚೆನ್ನಾಗಿ ಆಗಿದೆ. ನೀನೂ ಬರಬೇಕಾಗಿತ್ತು" ಎಂದು ಹೊಟ್ಟೆಯುರಿಸುತ್ತಿದ್ದ. ಆದರೂ ಸಮಾಧಾನದಿಂದ "ನನಗೆ ರೋಗಿಗಳು ಬಹಳ ಇರ್ತಾರಪ್ಪ. ಇಲ್ಲದಿದ್ದರೆ ಬರುತ್ತಿದ್ದೆ" ಎನ್ನುತ್ತಿದ್ದ. ಮುರಲಿ "ಅಯ್ಯೋ, ಆ ಸಾಯೋ ಮುಂಡೇದ್ಕೆ ಯಾಕೆ ಔಷಧ ಭಾವಾ. ಬಂದಷ್ಟು ಎಳೆಯೋದು ಬಿಟ್ಟು

ಯಾಕೆ ತೊಂದರೆ ತಗೊಳ್ಳೋದು. ಮತ್ತೆ ಹಾಗಾಗಿಯೇ ಆ ಡಾಕ್ಟರ್ ಶಿವ ರಾಮ್ ಮೂರಂತಸ್ತಿನ ಮನೆ ಕಟ್ಟಿರೋದು" ಎನ್ನುತ್ತಿದ್ದ. ರಾಮನಿಗೆ ಮನಸ್ಸು ನೊಂದಂತಾಗಿ, "ಹಾಗಲ್ಲ ಮುರಲಿ, ಅದರಂಥಾ ಮಾನವ ಸೇವೆ ಯಾವುದೂ ಇಲ್ಲ. ನಮ್ಮ ಜನ್ಮಕ್ಕೆ ಅದರ ಸಾಫಲ್ಯ ಬರಬೇಕು. ನಾಲ್ಕು ಹೀನರನ್ನು ಒಳ್ಳೆಯವರನ್ನಾಗಿ ಮಾಡಬೇಕು. ದುಡ್ಡೊಂದೇ ಅಲ್ಲ."ಎನ್ನುತ್ತಿದ್ದನು.

"ನಿನ್ನ ಆದರ್ಶ ಬಿಟ್ಟು ಬಿಡು ಭಾವಾ. ಅವೆಲ್ಲಾ ಕಾಂಗ್ರೆಸ್‌ಗೆ ನಮಗ್ಯಾಕೆ ಅಂಥಾದ್ದು ? ಓದೋಕೆ ಖರ್ಚು ಮಾಡಿದ್ದನ್ನೆಲ್ಲಾ ತಿರುಗಿಸೋ ಬೇಕೋ ಬೇಡವೋ "

ಅಷ್ಟರಲ್ಲಿ ಮಂಜು ಬಂದು "ಅವರದ್ದೇನು ಹೋಗ ಬೇಕಾಗಿದೆ. ಎಲ್ಲಾ ನಮ್ದೇ ತಾನೆ ಖರ್ಚಾಗಿರೋದು. ? ಒಂದು ಪೈ ಕೂಡಾ ಅವರ್ದಲ್ಲ. ನಮ್ಮ ಹಂಗಿನಲ್ಲಿ ಓದಿದ್ದಾರೆ. ದುಡ್ಡು ಬಂದರೆಷ್ಟು, ಬಿಟ್ಟರೆಷ್ಟು, ನನ್ನ ಆಸ್ತಿ ಇದೆ ಯಲ್ಲ. ಕೂತು ತಿನ್ನೋಕೆ" ಎಂದು ಬಿಟ್ಟಳು. ರಾಮನ ಕೋಪಕ್ಕೆ ಅಳತೆ ಬೇಕೆ ? ಕ್ರೋಧಾಗ್ನಿ ಜ್ವಲಿಸಿತು. ಕಣ್ಣಲ್ಲಿ ಕೆಂಡ ಉಗುಳಿತು. ಕೊನೆಯ ವರ್ಷದ ಮೂರು ತಿಂಗಳಿನ ನೂರಾರು ರೂಪಾಯಿ ಖರ್ಚಿಗೆ ಇಷ್ಟೊಂದು ಮಾತೆ ? ಅದೂ ಈ ಹೆಣ್ಣಿಗೆ ?

"ಬಾಯಿ ಮುಚ್ಚು. ಹುಚ್ಚಿ ? ಏನೇ ನಿನ್ನ ದುಡ್ಡು ತಿಂದಿರೋದು" ಎಂದು ಬಲವಾಗಿ ಕೆನ್ನೆಗೆ ನಾಲ್ಕು ಬಿಟ್ಟು, ಬಲವಡಗಿದಂತನಂತಾಗಿ ಮತ್ತೆ ಸೋಫಾದಲ್ಲಿ ಕುಸಿದ. ಮುರಲಿಯೂ, ಗಂಗತ್ತೆಯೂ ಹೌಹಾರಿದ್ದರು. ಗಂಗತ್ತೆಗೂ ದುರಭಿಮಾನದ ದರ್ಪ ಬಂತು.

"ಏನು ತಿಂದಿಲ್ಲವೇ ನಮ್ಮ ದುಡ್ಡನ್ನು ? ಆಸ್ತಿಯ ಆಸೆಗೆ ಮದುವೆ ಯಾಗಿ ಬೀಗದ ಕೈಗೆ ಪೀಡಿಸಿದ್ದು ಗೊತ್ತಿಲ್ಲವೇನು ? ಹಂಗಿನ ಅನ್ನ ತಿಂದು ನಮ್ಮ ಮನೆಗೇ ಕೇಡು ಬಗೆಯೋದು ನೋಡು ಮತ್ತೆ ? ಎಂದಾದರೂ ಕಂಡಿದ್ದರೆ ತಾನೆ ಅಂಥ ಅನ್ನ ? ತಿಂದು ಕೊಬ್ಬು ಬಂದಿದೆ. ನೀನೇನು ಮಾಡಿಯಾ." ಎಂದು ಅಧಿಕಾರವಾಣಿಯಿಂದ ನುಡಿದಳು. ರಾಮನಿಗೆ ಮತ್ತೆ ಸಿಟ್ಟು ಬಂತು.

"ತಗೋ ನಿನ್ನ ನಾನೂರು ರೂಪಾಯಿ. ಅಷ್ಟೇ ತಾನೆ? ನನ್ನ ಮನೆ

ಯಲ್ಲೇ ನೀನು ಸೇರಿಕೊಂಡು, ನನಗೇ ತಿರುಗಿ ಮಾತಾಡ್ತೀಯಾ ಹೊರಡು ಮೊದಲು. ನೀನೂ ಕೂಡ ಮುರಲಿ'' ಎಂದನು ರಾಮು.

"ಯಾರದೋ ಮನೆ? ನೀನು ನಮ್ಮ ಮನೆ ನಾಯಿ ಕಾಣೋ. ಗತಿ ಗೆಟ್ಟು ಇಲ್ಲಿಗೆ ಓಡಿ ಬಂದಿದೀಯ. ನನಗೆ ಅಂತೀಯ, ಮನೆ ಮಗಳಿಗೆ" ಎಂದಳು ಗಂಗತ್ತೆ. ಮಂಜುವೂ ಅಲ್ಲಿಗೆ ಅಳುವುದನ್ನು ನಿಲ್ಲಿಸಿ ನುಡಿದಳು.

"ಯಾರದು ಎಂದಿರಿ ಮನೇನ? ನನ್ನ ಆಸ್ತಿಯ ಆಸೆಗೆ ಇಲ್ಲಿ ಬಂದು ಸೇರಿಕೊಂಡು, ನನ್ನ ಒಡವೆ ವಸ್ತು ಎಲ್ಲವನ್ನೂ ತಂಗಿಗೆ ತಮ್ಮನಿಗೆ ಕಳುಹಿಸಿ, ನನಗೇ ತಿರುಗಿ ಮಾತಾಡ್ತೀರಾ? ಎಲ್ಲಿ ನನ್ನ ಹಾರ ೧೩೦೦೦ ರೂಪಾಯಿ ಕೊಟ್ಟು ಮಾಡಿಸಿದ್ದರಲ್ಲಾ ನಮ್ಮ ಅಪ್ಪ? ತಂಗಿಗೆ ಕಳುಹಿಸಿ ಬಿಟ್ಟು, ಮದುವೆಗೆ ಹೋದರೆ ನಾನು ನೋಡಿ ಬಿಡ್ತೀನಲ್ಲ ಅಂತಾ ಇಲ್ಲೇ ಇದ್ದು ಬಿಟ್ಟು, ನನ್ನ ಮನೆ ಅಂತಾ ಗಂಗತ್ತೆಗೆ ಹೋಗೂ ಅಂತೀರ?"

ಹಾರದ ವಿಚಾರ, ಮಂಜುವಿನ ಮಾತಿನ ಲಹರಿ ಕೇಳಿ ರಾಮನಿಗೆ ದಂಗು ಬಡಿಯಿತು. ಮಾತೇ ಹೊರಡಲಿಲ್ಲ. ಮುರಲಿಯೂ ನಗುನಗುತಾ ಹೊರಗೆ ಬಿದ್ದ. ಗಂಗತ್ತೆಯೂ ಸಿಡುಕಿನ ಮುಖದಿಂದ, "ಏಳೇ ಮಂಜು ಹೋಗೋಣ ಈ ನಾಯಿ ಜೋತೇಲೇನು? ತಿನ್ನೋಕೆ ಅನ್ನವಿಲ್ಲದ್ದನ್ನು ಗಂಟು ಹಾಕ್ಕೋಳೋ ಅಂತಾ ಹುಟ್ಟು ಎಲ್ಲಿ ಬಂತೋ ನಿನಗೆ. ಸಾಕುಬಾ" ಎಂದಳು. ನಾಯಿ ಎಂಬ ಮಾತು ರಾಮುನನ್ನು ಕೆರಳಿಸಿಯೇ ಕೆರಳಿಸಿತು. ಮುಚ್ಚು ಬಾಯಿ ನನಗೇ ತಿರುಗಿ ಮಾತಾಡ್ತೀಯಾ? ಮುರಲಿಗೂ ನಿನಗೂ ಏನು ಸ್ನೇಹವೆಂದು ನನಗೆ........"ಮುಂದೆ ಮಾತು ಹೊರಡದಾದುವು. ಮಂಜುವಿಗೂ ಮುಖ ಕೆಂಪೇರಿತು.

"ಓಹೋ, ಇದು ಬೇರೆ ಕತೆ ಕಟ್ಟಿದ್ದೀರೋ ನೀವು. ಸಾಕು ನಿಮ್ಮ ಮಾತು.'' ಎನ್ನುವಷ್ಟರಲ್ಲಿ ನಾರಾಯಣ ಬಂದ. ಮಂಜುವಿಗೆ ಮಾತು ಹೊರಡದಾಯ್ತು. ರಾಮು ನಾರಾಯಣನನ್ನು ಕೇಳಿದ.

"ನಾರಾಯಣ, ಏನು ನೀನು ಹೇಳಿದ್ದು ಮುರಲಿಯ ವಿಷಯದಲ್ಲಿ? ನಿಜ ತಾನೆ"?.

"ಹೌದು ರಾಯರೇ, ಸಾಹುಕಾರರ ಮನೆ ಹೆಣ್ಣುಮಕ್ಕಳು ಏನು ಮಾಡಿದರೂ ಮಾಫಿ ತಾನೆ. ಬಡವರ ಮನೆಯದಾಗಿದ್ದರೆ ಸಾವಿರ ಜನರ ಬಾಯಲ್ಲಿ

ಸಾವಿರ ಮಾತು." ಎಂದು ನಾರಾಯಣ ಉತ್ತರವಿತ್ತ.

ಮಂಜುವಿನ ತಲೆ ತಿರುಗಿತು.

"ನಾರಾಯಣ, ಈಗಿಂದೀಗಲೇ ಹೊರಡು. ಇಲ್ಲದಿದ್ದರೆ ನೋಡು" ಎಂದಳು.

"ಇಗೋ ಹೊರಟೇ ಬಿಟ್ಟೆ. ನಿಮ್ಮ ಋಣ ಮುಗಿದು ಬಹಳ ದಿನ ಆಯ್ತು'' ಎಂದು ಅಡಿಗೆಯ ಮನೆ ಕಡೆ ಹೊರಟ. ಮಂಜುವೂ ಗಂಗತ್ತಿಯೂ ಹೊರಟು ಬಿಟ್ಟರು ಒಳಕೋಣೆಗೆ. ಆಗಲೇ ರಾತ್ರಿ ಎರಡು ಗಂಟೆಯಾಗಿತ್ತು.

ರಾಮು ಹಾಸಿಗೆಯಲ್ಲಿ ಹೊರಳುತ್ತಿದ್ದ. ಪ್ರತಿಯೊಂದು ಮಾತುಗಳೂ ಅವನನ್ನು ಚುಚ್ಚುತ್ತಿದ್ದವು. ನಿಜ, ಎಲ್ಲವೂ ತನ್ನ ತಪ್ಪೇ. ''ತಂದೆ ಬೇಡವೆಂದರೆ ಆಸ್ತಿಯ ಆಸೆಗೆ ಮದುವೆಯಾದೆ. ತಾಯಿಯನ್ನು ಮರೆತೆ. ತಂಗಿ ತಮ್ಮಂದಿರನ್ನು ದೂರಮಾಡಿದೆ. ಹೆಂಡತಿಯನ್ನು ನಂಬಿದೆ. ಎಲ್ಲವೂ ಮೋಸವಾಯಿತು. ಅಪ್ಪ ಸಾಯುವಾಗಲೂ ಕೂಡ ಹೋಗಿ ನೋಡಲಿಲ್ಲ ಈಕೆಯ ಆಸ್ತಿಯ ಆಸೆಯಿಂದ. ಅಯ್ಯೋ, ದುಡ್ಡಿನಿಂದ ಎಷ್ಟು ಅನರ್ಥವಾಯಿತು. ತಾಯಿಯೆಲ್ಲೋ? ತಂದೆಯೆಲ್ಲೋ? ತಂಗಿಯೆಲ್ಲೋ? ಸೀತೆ, ಒಬ್ಬಳೇ ತಂಗಿ! ಒಬ್ಬನೇ ತಮ್ಮ ರಾಜ. ಹೋದರೆ ನನ್ನನ್ನು ನೋಡಿಯಾರೆ ?"

''ಅಮ್ಮ ನೀನು ಎಷ್ಟು ಪ್ರೀತಿಯಿಂದ ನನ್ನನ್ನು ನೋಡಿಕೊಂಡೆ. ಆದರೆ ಏನು ?— ಮಂಜುವಿನ ಪ್ರಭಾವದಲ್ಲಿ ಎಲ್ಲಾ ನಂಜಾಯಿತು" ಹೀಗೆ ಯೋಚನೆಗಳು ಮುತ್ತಿ ಮುತ್ತಿ ಬರುತ್ತಿರುವವು. ಕೊನೆಗೆ ಮನಶ್ಶಾಂತಿಗೆ ಮನೆ ಬಿಡಲು ನಿರ್ಧಾರ ಮಾಡಿದ. ಎದೆಯೊಂದು ಕ್ಷಣ ಶಾಂತವಾಯಿತು. ಮನಸ್ಸು ಸ್ಥಿರವಾಯಿತು. ಎದ್ದು ನೋಡಿದ. ನಾಲ್ಕು ಗಂಟೆ ಬಡಿದಿತ್ತು.

"ಸರಿ ಈಗಿನ ಗಾಡಿಗೆ ಹೊರಡುವುದು" ಎಂದು ನಿರ್ಧಾರ ಮಾಡಿ ಕೆಲವು ಬಟ್ಟೆಗಳನ್ನು ತುಂಬಿದ. ಜೇಬಿನಲ್ಲಿ ಸ್ವಲ್ಪ ಹಣವಿತ್ತು. ಯೋಚನೆ ಮಾಡದೆ ಹೊರಬಿದ್ದು ಸ್ಟೇಷನಿಗೆ ಬಂದು ಬಿಟ್ಟ.

ಎಲ್ಲಿಗೆ ಹೋಗಬೇಕೆಂದು ನಿರ್ಧಾರ ಮಾಡಿರಲಿಲ್ಲ. ರೈಲು ನಿಲ್ದಾಣಕ್ಕೆ ಬಂದಾಗ ಸ್ವಲ್ಪ ಸಮಸ್ಯೆಗಿಟ್ಟುಕೊಂಡಿತು. "ಊರಿಗೆ ಹೋಗಲೇ" ಎಂದು ಮನಸ್ಸು ಪ್ರಶ್ನಿಸಿತು. "ಈಗಲೇ ಬೇಡ ಅಲ್ಲಿಗೆ, ಯಾವ ಮುಖದಿಂದ

ಹೋಗಲಿ ಅವರ ಹತ್ತಿರಕ್ಕೆ” ಎಂದು ಮನಸ್ಸನ್ನು ಬದಲಿಸಿದ. ಸ್ಟೇಷನ್ನಿನಲ್ಲಿ ಓಡಾಡುತ್ತಾ ಕೊನೆಗೆ “ದೇಶದ ತುಂಬಾ ಪ್ರಖ್ಯಾತಿ ಪಡೆದ “ಆರೋಗ್ಯ ಧಾಮ” ಚಿಕಿತ್ಸಾ ಕೇಂದ್ರಕ್ಕೆ ಹೋದರೆ ಕೈತುಂಬಾ ಕೆಲಸವಾದರೂ ಆದೀತು. ವಿದ್ಯೆಗೂ ಸಾಫಲ್ಯ ದೊರೆತೀತು: ಮನಸ್ಸೂ ಶಾಂತವಾದೀತು” ಎಂದು ಮನಸ್ಸನ್ನು ಅಚಂಚಲವಾಗಿಸಿ ಅಲ್ಲಿಗೆ ಟಿಕೆಟ್ ತೆಗೆಯಿಸಿದ. “ಇನ್ನು ಈ ಗೊಡವೆಯೇ ಬೇಡ. ಹೌದು. ಮುಂದೆ ಏನಾದರೂ ಅಪವಾದ ಬಂದರೆ” ಎಂಬ ಅನುಮಾನವೂ ಮೂಡಿ ಕಳವಳವಾಯಿತು. ಆದರೆ ಅದರಿಂದ ತನ ಗೇನು ಎಂದು ರೈಲು ಏರಿಬಿಟ್ಟ.

ರೈಲು ಮುಂದೆ ಸಾಗಿದಂತೆ ಜನಜಂಗುಳಿಯ ಮುಂಬಯಿಂದ ದೂರ ಸರಿದಂತೆ, ಮನಸ್ಸಿಗೆ ನೆಮ್ಮದಿ ತುಂಬುತ್ತಿತ್ತು ಜಯರಾಮನಿಗೆ. ಸರಸ ವಾಡುತ್ತಿರುವ ನಲ್ಲನಲ್ಲೆಯರನ್ನು ನೋಡಿದಾಗ ಹೊಟ್ಟೆ ಕಿವಿಚಿಕೊಳ್ಳುವಂತಾ ಗುತಿತ್ತು. ರೈಲಿನಲ್ಲಿ ಘೋರಘಾಟ್‌ನ ಪ್ರಕೃತಿ ಸೌಂದರ್ಯವನ್ನು ನೋಡಿ ದಾಗ ಅವನ ಮನಸ್ಸಿಗೆ ಅತೀವ ಶಾಂತಿ ಬಂದಿತು. “ಏನು ಅದ್ಭುತವಿದೆ ವೈಚಿತ್ರ್ಯ ? ಅದರ ಮುಂದೆ ನಾವೆಷ್ಟರವರು ! ಮೇಲೆ ನೋಡಿದರೆ ವಿಶಾಲ ವಾದ ಆಗಸ. ಕೆಳಗೆ ನೋಡಿದರೆ ಕಣಿವೆಯಲ್ಲಿ ಹಸಿರು ಮೂಡಿ, ಜುಳು ಜುಳನೆ ಹರಿಯುತ್ತಿರುವ ನೀರಿನ ಝರಿಗಳು; ಬೀಸುವ ತುಳಿಗಾಳಿ. ಉನ್ನ ತವಾದ ಪಶ್ಚಿಮ ಘಟ್ಟಗಳು, ಅವನನನ್ನು ಹರ್ಷಗೊಳಿಸಿದುವು. ಹಾಗೆಯೇ ಸುಮ್ಮನೆ ಕಿಟಕಿಯಿಂದ ಹೊರಗಡೆ ನೋಡುತ್ತಿದ್ದ. ಇದ್ದಕ್ಕಿದ್ದಂತೆಯೇ ಅವನ ಭುಜದ ಮೇಲೆ ಕೈ ಬಿತ್ತು. ರಾಮ ಒಂದೇ ಸಾರಿಗೆ ಹೆದರಿಬಿಟ್ಟು ಹಿಂತಿರುಗಿ ನೋಡಿದ.—ಅವನ ಆಶ್ಚರ್ಯಕ್ಕೆ ಮೇರೆಯುಂಟೇ ! ಬಾಲ್ಯ ಸ್ನೇಹಿತ ಸತ್ಯ ನಿಂತಿದ್ದಾನೆ. ! ಸತ್ಯನೇ ನಗುನಗುತ್ತಾ ಮಾತನಾಡಿದ.

‘‘ಏನು ರಾಮು, ಎಲ್ಲಿಗೆ ಹೊರಟಿದ್ದೆ” ?

“ಆರೋಗ್ಯಧಾಮಕ್ಕೆ. ನೀನೆಲ್ಲಿಗೆ?’’

‘‘ಅಲ್ಲಿಗೇನೆ. ಹೌದು ನೀನ್ಯಾತಕ್ಕೆ ಹೊರಟೆ ಕೆಲಸ ಬಿಟ್ಟು”

‘‘ಏನು ಕೆಲಸವೋ ಇದ್ದೇ ಇದೆ. ಅದನ್ನ ನೋಡಿಯೇ ಇರಲಿಲ್ಲವಲ್ಲ ಅಂತಾ ಬಂದೆ. ಹೌದು ನೀನೇನು ಮಾಡುತ್ತೀಯಾ ಅಲ್ಲಿ?’’.

‘‘ನಾನೇ? ಅಪ್ಪ ಅದರ ಸರ್ವಾಧಿಕಾರಿ. ಎಲ್ಲವೂ ನನ್ನದೇ ಕಾರಭಾರು

ಏನು ಮಾಡೋದು ಮ್ಯಾನೇಜಮೆಂಟಿನವರು ನನ್ನ ತಲೆಗೇ ಕಟ್ಟಿಬಿಟ್ಟಿದ್ದಾರೆ. ಆದರೂ ಏನಾಯ್ತು ಬಿಡು ನಮಗೆ. ಎಲ್ಲಾ ಜನರಿಗೇ ತಾನೇ ? ಅವರ ಹಣ ಅವರಿಗೇ ಹೋಗಬೇಕು."

''ಅಲ್ಲಿ ಏನು ಹೆಚ್ಚಿನದು ?''

'' ಹೆಚ್ಚಿನದೇನೆಂದು ಕೇಳುವಷ್ಟು ಇಲ್ಲವಪ್ಪ. ಆದರೇ ಅದೇ ಹೆಚ್ಚು ನೋಡು ಕೆಲ್ಸ. ಕೆಲ್ಸ ಅಷ್ಟೆ."

''ಎಷ್ಟಿದೆ ಹಣ ?''

''ಎರಡು ಲಕ್ಷ ಮೀರಿದೆ ?"

''ಲೆಕ್ಕದಲ್ಲಿ ಎಷ್ಟಿದೆಯೋ? ಅನಾಮತ್ತು ಖಾತೆ ಬೇರೆ ಬಿಟ್ಟುಬಿಡು".

''ನನಗೆ ಗೊತ್ತು ನೋಡು. ಆ ಗಂಟು ಹೊಡೆಯೋ ಬುದ್ಧಿ ನಮಗಿನ್ನೂ ಬಂದಿಲ್ಲ. ಅಲ್ಲವ್ರೋ, ಜನ ನಮ್ಮನ್ನು ನಂಬಿಕೊಂಡು ಒಂದು ಸಾಮಾಜಿಕ ಕಾರ್ಯಕ್ಕೆ ಉಪಕಾರವಾಗಲಿ ಅಂತ ಕೊಟ್ಟರೆ ಅವರಿಗೆ ಅಪನಂಬಿಕೆಯಾಗಿ ವರ್ತಿಸ ಬಹುದೇನು ? ನಮ್ಮ ಕೈಲಾದಷ್ಟನ್ನು ಮಾಡುವುದಷ್ಟೇ. ಸರಿಯಾಗಿ ನಮಗೆ ಸಂಬಳ ಕೊಡುತ್ತಾರಲ್ಲ. ಒಟ್ಟಿನಲ್ಲಿ ಜನಕ್ಕೆ ನಮ್ಮಿಂದು ಸಹಾಯವಾದರಾಯಿತು.''

''ನಿನಗೆ ಹುಚ್ಚು ಸತ್ಯ. ನಿನ್ನಷ್ಟು ಸರಳ ಜೀವಿಗಳು ಆಗಿ ಎಷ್ಟು ಜನ ಇದ್ದಾರು ? ಆಗಿ ಇರೋದೆ ಈಗಿನ್ಕಾಲಕ್ಕೆ ತಪ್ಪುನೋಡು."

''ಯಾರಾದರೂ ಇರಲಿ ಬಿಡಲಿ ಅದು ಬೇರೆ ಮಾತು. ರಾಮು ನಮ್ಮ ಬಡಜನದ ಗೋಳು ನೀನು ನೋಡಿಲ್ಲ. ಅವರನ್ನು ಯಾರು ಕೇಳಬೇಕು? ಸರ್ಕಾರವಾದರೂ ಎಷ್ಟು ಮಾಡೀತು? ಅಥವಾ ಸರ್ಕಾರವಾದರೂ ಯಾವುದು? ಯಾರದು? ನಮ್ಮದೇ ತಾನೇ ! ನೀನು ಡಾಕ್ಟರಾಗಿರುವುದೂ ರೋಗ ನಾಶ ಮಾಡುವುದಕ್ಕಷ್ಟೆ? ಮತ್ತೆ ಹಾಗೆ ಮಾಡಿದರೆ ನಿನಗೆ ನಷ್ಟವೇನು? ಜನ ನಿನ್ನನ್ನು ಜ್ಞಾಪಿಸಿಕೊಳ್ಳುತ್ತೆ. ಧನ ಏನು ಬಂದೀತು!'' ಅಷ್ಟರಲ್ಲಿ ''ಆರೋಗ್ಯಧಾಮ" ನಿಲ್ದಾಣ ಬಂದಿತು. ಇಬ್ಬರೂ ಇಳಿದು ಮನೆಗೆ ನಡೆದರು.

ಮೊದಲು ಜಯರಾಮನಿಗೆ ಮುಖ ಕಂಡುದುದು ಸತ್ಯನಹೆಂಡತಿಯದು ಆಕೆಯ ಹಸನ್ಮುಖದಿಂದ ಮತ್ತಷ್ಟು ಉಲ್ಲಸಿತನಾದ. ಸಾಮಾನುಗಳೆಲ್ಲವನ್ನೂ

ಇಟ್ಟು ಕೈಕಾಲು, ಮುಖ ತೊಳೆಯಲು ಒಳಕ್ಕೆ ಹೋಗಿ ಬಂದ ನಂತರ, ಸತ್ಯನೇ ಹೆಂಡತಿಯನ್ನು ತನ್ನ ಸ್ನೇಹಿತನಿಗೆ ಪರಿಚಯ ಮಾಡಿಸಿದನು. ಅವರ ಅನ್ಯೋನ್ಯತೆ, ಇದ್ದಷ್ಟರಲ್ಲಿ ಅವರು ಸುಖಿಸುತ್ತಿರುವುದು, ಕಾಡು ಹಕ್ಕಿಗಳಂತೆ ಅವರಿರುವ ರೀತಿ, ಆಕೆಯಾಡುವ ಮಧುರವಾದ ಮಾತುಗಳು, ರಾಮನನ್ನು ಬಹಳವಾಗಿ ಬದಲಾಯಿಸಿದವು. ಎಲ್ಲವನ್ನೂ ಮುಗಿಸಿ ಬಂದು ಹೊರಚಾವಡಿಯಲ್ಲಿ ಕುಳಿತರು. ಆಗಲೇ ಸತ್ಯನ ಮನೆ ಕಡೆ ಜನ ಬಂದು ಸೇರುತ್ತಿದ್ದರು. ರಾಮು ಕೇಳಿದ.

"ಇದೇನೋ ಸತ್ಯ ಬೆಳಗಾದ ಕೂಡಲೇ?" ಎಂದು ಆಶ್ಚರ್ಯ ಚಕಿತನಾದ.

"ಹೀಗೆಯೇ ಇದೆ ನೋಡು ಸಂಜೆಯವರೆಗೂ. ಯಾವು ಯಾವುದೋ ಹಳ್ಳಿಯಿಂದ ಬರುತ್ತಾರೆ. ಇನ್ನೂ ತೋರಿಸುತ್ತೇನೆ ಬಾ. ಎಲ್ಲಾ ವಾರ್ಡುಗಳು, ಔಷಧ, ಉಪಚಾರ, ಊಟದ ವ್ಯವಸ್ಥೆ ಎಲ್ಲವೂ ಹೇಗಿವೆ ಎಂಬುದನ್ನು" ಎಂದು ಇಬ್ಬರೂ ಎಲೆಯಡಿಕೆ ಜಗಿಯುತ್ತಾ ಹೊರಡಲನುವಾದರು. ಸತ್ಯ ಹೆಂಡತಿಯನ್ನೂ ಕರೆದ.

"ನೀವು ಹೋಗಿ ಬನ್ನಿ ಅವರ ಜೊತೇಲಿ. ನಾನೂ ಬಂದು ಬಿಟ್ಟರೆ ಇಲ್ಲಿ ಪಾಪ ಇವರನ್ನು ಮಾತಾಡಿಸುವವರಾರು ? ಇಲ್ಲಿ ಎಷ್ಟು ಹೊತ್ತು ನಿಲ್ಲಬೇಕು ನಾವು ತಿರುಗಾಡಿ ಬರೋವರೆಗೂ?" ಎಂದವಳು ನುಡಿದಳು. ಸತ್ಯನೂ ನಕ್ಕು, "ಹೌದು ಹೌದು, ನೀನೇ ಎಲ್ಲಾನೂ ಮಾಡು. ಬಿಟ್ಟು ಕೊಟ್ಟಿಲ್ಲ ನಮಗೆ ಮನೇನೂ, ಸಂಬಳಾನೂ. ಹ್ನೂ, ಬರ್ತೇವೆ. ಊಟಕ್ಕೆ ತಯಾರಾಗಲಿ ಬರೋದ್ರಲ್ಲಿ"ಎಂದನು.

"ಸಾದ್ಯವಾದರೆ ಮಾಡುತ್ತೇನೆ. ಇಲ್ಲದಿದ್ದರೆ ಎಲ್ಲಾ ನಿಮ್ಮದೇನೆ. ಅವತ್ತಿನ ಬಾಕಿ ಇದೆ ನೋಡಿ ನಿಮ್ಮದು" ಎಂದಳು.

"ಒಳ್ಳೇದು. ನಿನ್ನ ಕೆಲಸ ನೋಡಿಕೋ. ಬಂದ ಮೇಲೆ ತಾನೆ ಅದೆಲ್ಲಾ ವಿಷಯ" ಎಂದನು. ಮತ್ತೊಮ್ಮೆ ಆಕೆ ಮುಗುಳು ನಕ್ಕಳು. ಜಯಧಾಮ ಈ ದಂಪತಿಗಳ ಕಾರ್ಯನಿರ್ವಹತೆ, ತಿಳಿಹಾಸ್ಯದ ಮಾತುಗಳು, ಜೀವನದ ವೈಖರಿ ನೋಡಿ ಬೆರಗಾದ. ತನ್ನ ಮಂಜುವನ್ನು ಹೋಲಿಸಿದ. "ಬರೀ ಓದಿದ್ದರೇನು, ಹಣವಿದ್ದರೇನು ? ಸೌಂದರ್ಯವಿದ್ದರೇನು? ಹಣದಿಂದ ಸುಖವಿಲ್ಲ

ಸಂಸಾರ. ಮನದಿಂದ." ಎಂದು ನಿಟ್ಟುಸಿರುಗರೆಯುತ್ತಾ ಅವನ ಜೊತೆ ಹೊರಟ. ಬೆಟ್ಟದ ಆವಾಸಸ್ಥಾನದಲ್ಲಿ ಇದ್ದುದರಿಂದ ಚಳಿ ವಿಪರೀತ. ಇನ್ನೂ ಮಂಜು ಆವರಿಸಿಯೇ ಇತ್ತು. ಚಿಕ್ಕ ಚಿಕ್ಕ ಮನೆಗಳಲ್ಲಿ ರೋಗಿಗಳು ಮಲಗಿದ್ದರು. ಕೆಲವರಾಗಲೇ ಬೆಳಗಿನ ವ್ಯಾಯಾಮಕ್ಕೆ ತಯಾರಾಗುತ್ತಿದ್ದರು. ಮುಖ ನೋಡಿದರೆ ಕಾಯಿಲೆಯೇ ಕಾಣುತ್ತಿರಲಿಲ್ಲ. "ನೋಡು ಈತನಿಗೆ ಕ್ಷಯ ಬಂದಿತ್ತು, ತಿಂಗಳ ಹಿಂದೆ. ಈಗ ಹೇಗಿದ್ದಾನೆ?" ಎಂದು ಒಬ್ಬನನ್ನು ತೋರಿಸಿದನು. "ನೋಡು ಪಾಪ, ಈ ಹುಡುಗಿ ಗಂಡ ಸತ್ತವಳು, ಎಷ್ಟು ಕೆಲಸ ಮಾಡುತ್ತಿದ್ದಾಳೆ" ಎಂದೊಬ್ಬ ನರ್ಸನ್ನು ತೋರಿಸಿದನು. ಹೀಗೆಯೇ ರೋಗಿಗಳ ಪರಿಚಯ. ಪರಿಚಾರಕರು, ಸ್ನೇಹಿತರು, ಸಂಗಾತಿಗಳು ಎಲ್ಲರನ್ನೂ ತೋರಿಸಿ ಪರಿಚಯ ಮಾಡಿಸಿದನು. ಜಯರಾಮ ತನ್ನ ಮುಂಬಯಿಯ ದವಾಖಾನೆಯ ಥಾಂದಲೆಯ ಜಾಗವನ್ನೂ, ತನ್ನ ಚಿಕಿತ್ಸಾಕ್ರಮವನ್ನೂ, ಮನಸ್ಸಿಲ್ಲದೆ ಅವರನ್ನು ಆರೈಕೆ ಮಾಡಿಸಿಕೊಳ್ಳುತ್ತಿದ್ದುದನ್ನೂ ನೆನಪಿಗೆ ತಂದುಕೊಂಡನು. "ಎಷ್ಟು ಶಾಂತವಾದ ಸ್ಥಳ ಸತ್ಯ ಇದು. ಬಹಳ ಒಳ್ಳೆಯ ಸೇವೆ ಮಾಡುತ್ತಾ ಇದ್ದೀರಿ ನೀವು. ನೀವು ದಯ ಮಾಡಿದರೆ, ನಾನೂ ಕೂಡಾ ಸೇರಿ ಬಿಡುತ್ತೇನೆ ಇದಕ್ಕೆ." ಎಂದು ಬಿಟ್ಟ ಉದ್ವೇಗ ಪೂರಿತನಾಗಿ. ಸತ್ಯ ಅವಕ್ಕಾಗಿ ಬಿಟ್ಟ. ಬಹಳ ಹೊತ್ತಿನ ನಂತರ ಇಬ್ಬರೂ ಹೆಚ್ಚು ಮಾತು ಆಡದೆ ಹಿಂತಿರುಗಿದರು.

"ಅದೆಲ್ಲಾ ಸರಿ ರಾಮು. ಸಂಬಳ ಕಡಿಮೆ ನೋಡು. ಹೆಚ್ಚಾಗಿ ತೊಂದರೆ ತೆಗೆದುಕೊಳ್ಳಬೇಕು. ಏಕೆಂದರೆ ಇದು ಸಾರ್ವಜನಿಕ ಧರ್ಮಾರ್ಥ ಚಿಕಿತ್ಸಾಲಯ. ಎಲ್ಲರಿಗೂ ಸಮಾನವಾದ ಆರೈಕೆ ದೊರೆಯಬೇಕು."

"ಸತ್ಯ, ಅದರಲ್ಲೇನು ? ಜನ ಇಷ್ಟು ಆಸೆಯಿಂದ ಕೆಲಸ ಮಾಡುತ್ತಿರುವುದು ಹೆಚ್ಚೋ ನಾವು ಮಾಡುವುದು ಹೆಚ್ಚೊ? ಸದಾ ಸಿದ್ಧನಪ್ಪಾ. ನನ್ನನ್ನು ಸೇರ್ಸಿಕೊಂಡು ಬಿಡು''

ಸತ್ಯ ಅತಿ ಸಂತೋಷದಿಂದ ರಾಮುನನ್ನು ತಬ್ಬಿಕೊಂಡು ಬಿಟ್ಟ. ಆ ಮೇಲೆ ಮನೆ ಸೇರಿದರು.

ಸೀತೆಯೇನೋ ಶಾಲೆಯಲ್ಲಿ ಕೆಲಸಕ್ಕೆ ಸೇರಿಬಿಟ್ಟಿದ್ದಳು. ಸಂಸಾರಕ್ಕೆ

ಏನೂ ತೊಂದರೆಯಿಲ್ಲದಂತೆ ಸಾಕಾದಷ್ಟು ಸಂಬಳ ಬರುತ್ತಿತ್ತು. ಶಂಕರಮ್ಮ ನಿಗೆ ಸ್ವಲ್ಪ ದಿನ ವಿಶ್ರಾಂತಿ ಸಿಕ್ಕಿದಂತಾಯ್ತು. "ರಾಜನನ್ನೊಮ್ಮೆ, ರಾಮನ ನ್ನೊಮ್ಮೆ ನೋಡಿಬಿಟ್ಟರೆ ಸಾಕು. ಯಾವ ಜನ್ಮದ ಕರ್ಮಫಲವೋ ಈ ಜನ್ಮ ದಲ್ಲಿ ಮಕ್ಕಳಿದ್ದೂ ಇಲ್ಲದಂತೆ ನೆನೆದು ಸಾಯಬೇಕಾಗಿದೆ'' ಎಂದು ದಿನೇ ದಿನೇ ಕೊರಗಿ ಕೃಶಳಾಗುತ್ತಾ ಬಂದಳು. ಸೀತೆ ಮಾತ್ರ ತಾಯಿಗೆ ಗದರಿಸಿ ಬಿಡುತ್ತಿದ್ದಳು. ''ಸಾಕು ಬಿಡಮ್ಮಾ ನಿನ್ನ ಹುಚ್ಚು. ನಿನಗೆ ಮಕ್ಕಳಿಲ್ಲಾಂತ ತಿಳಿದುಕೊಂಡು ಬಿಡು. ಅದನ್ಯಾಕೆ ಯೋಚನೆ ಹಚ್ಚಿಕೊಂಡು ಆ ಪಾಪಿ ಮುಂಡೇದಕ್ಕೆ ಕೊರಗುತ್ತೀಯ. ಹೆತ್ತ ತಾಯಿ ಅಂತ ಮಮತೆ ಇಲ್ಲದ ಮಕ್ಕ ಳಿಗೇಕೆ ನಿನ್ನ ಚಿಂತೆ?" ಎಂದರೆ ಶಂಕರಮ್ಮನಿಗೆ ಕರುಳಿಗಿರಿದಂತಾಗುತ್ತಿತ್ತು. ಎಷ್ಟಾದರೂ ತಾಯಿ ಬಸಿರಷ್ಟೆ?

ಸೀತೆಗಾದರೋ ನೆಮ್ಮದಿಯಿಲ್ಲದಂತಾಯಿತು, ಮನೆಯಲ್ಲಿ ತಾಯಿ ಯನ್ನು ನೋಡಬೇಕು. ಹೊರಗಡೆ ಪುಂಡರ ಕಾಟ ನೋಡಬೇಕು. ರಾತ್ರಿ ಯಾಗುತ್ತಲೂ ಮನೆಯ ಮುಂದೆ ಊರ ಅನೇಕ ಕೇಡಿಗಳು ಸಿಳ್ಳುಹಾಕುತ್ತ ಸಿನಿಮಾದ ಹೊಲಸು ಸಂಗೀತ ಹೇಳುತ್ತಾ ಧಾಂದಲೆ ನಡೆಸುತ್ತಿದ್ದರು. ಶಾಲೆಯಿಂದ ಬರುವಾಗಲೇ ಹುಚ್ಚು ನಾಯಿಗಳಂತೆ ಹಿಂಬಾಲಿಸುತ್ತಿದ್ದರು. ಮುಖವೆತ್ತಿ ನೋಡಿದರೆ ಹುಚ್ಚು ನಗೆಯಿಂದ ಹಲ್ಲು ಬಿಡುತ್ತಿದ್ದರು. ಆದರೆ ಆಕೆಯ ತೀಕ್ಷ್ಣ ದೃಷ್ಟಿಗೆ ಬೆದರುತ್ತಿದ್ದರು. ಒಂದು ರಾತ್ರಿಯಂತೂ ಸೀತೆಗೆ ಇವರ ಹಾವಳಿ ತಡೆಯಲಾಗಲಿಲ್ಲ. ಎದ್ದವಳೇ ಕೈಯಲ್ಲೊಂದು ಚಪ್ಪಲಿ ತೆಗೆದುಕೊಂಡು ಹೊರಗೆ ಬಂದು ಗದರಿಸಿದಳು. ಇನ್ನುಳಿದವರು ಕೇಳಬೇಕೆ? ಹೇಳದೆ ಕೇಳದೆ ಪಲಾಯನ ಮಾಡಿದರು.

"ಇದೇನಮ್ಮ ಸೀತೆ ಅವರೊಡನೆ ಜಗಳ? ಪೋಲಿ ಮುಂಡೇ ಗಂಡರು. ಏನಾದರೂ ಮಾಡಿಯಾರು" ಎಂದಳು ಶಂಕರಮ್ಮ.

"ಅಮ್ಮಾ ಅವರೇನು ಮಾಡಿಯಾರು ನನ್ನನ್ನು? ಏನೂ ಅಂತ ತಿಳಿ ದಿದಾರೆ ನಮ್ಮನ್ನು? ಮರ್ಯಾದೆ ಬೇಡವೇ ಈ ಪುಂಡರಿಗೆ. ಶುದ್ಧ ನಾಯಿ ಗಳು. ಹೆಣ್ಣಿನ ಒಂದು ಬೆರಳಿಗೆ ಈಡಾಗುವುದಿಲ್ಲ. ಬಿಡಬಾರದೆ ಅವರು'' ಎಂದಳು. ಶಂಕರಮ್ಮ ನಿಟ್ಟುಸಿರು ಬಿಟ್ಟು ಒಳಕ್ಕೆ ಹೋದಳು. ಸೀತೆ ಹೀಗೆಯೇ ಶಾಲೆಯಲ್ಲಿಯೂ ಅನುಭವಿಸಬೇಕಾಯಿತು. ರಂಗನಾಥನಂತೂ

ನೆವವಿಲ್ಲದೆ ಈಕೆಯನ್ನು ಮಾತನಾಡಿಸಲು ಹವಣಿಸುತ್ತಿದ್ದ. ಈಕೆಯೇ ಮುಖ ತಿರುವಿಕೊಂಡು ಬರುತ್ತಿದ್ದಳು. ಶಂಕರಮ್ಮನಿಗೆ ಮನಸ್ವಾಸ್ಥ್ಯವಿಲ್ಲದೆ ದೇಹ ಸ್ವಾಸ್ಥ್ಯವೂ ಉಡುಗುತ್ತಿದ್ದಿತು. ಮುಖಚರ್ಯೆಯೇ ಬದಲಾಯಿಸಿ ಕ್ಷಯರೋಗದ ಚಿಹ್ನೆಗಳು ಕಾಣಿಸಿದುವು. ಸೀತೆ ಹೌಹಾರಿದಳು. ಆದರೆ ತಾಯಿಗೆ ಏನೂ ತಿಳಿಸಲಿಲ್ಲ. ಮೂಲೆಯಲ್ಲಿ ಕೂತು ಅಳುತ್ತಿದ್ದಳು. ಮುಂದೆ ಮಾಡುವುದೇನು ಎಂಬುದೇ ಆಕೆಯ ಹರಿಯಲಾರದ ಸಮಸ್ಯೆಯಾಯಿತು.

ಸತ್ಯ, ಜಯರಾಮ ಇಬ್ಬರೂ ಅಂದಿನ ಸಂಜೆ ಪ್ರಖ್ಯಾತವಾದ "ಕುರುಕ್ಷೇತ್ರ'' ನಾಟಕಕ್ಕೆ ಹೋಗಬೇಕೆಂದು ಮೊದಲೇ ಸಿದ್ಧರಾದರು: ಸತ್ಯ ಪತ್ನಿಯನ್ನು ಬಿಟ್ಟು ಬರಲು ಸಿದ್ಧನಾಗಿರಲಿಲ್ಲ. ಆದ್ದರಿಂದ ಮೂವರೂ ಸಿದ್ಧರಾಗಿ ಸಂತೋಷದಿಂದ ತೆರಳಿದರು. ಆದರೆ ಅವರು ತಿಳಿದಿದ್ದ "ಕುರುಕ್ಷೇತ್ರ" ನಾಟಕ, "ದಾನಶೂರ ಕರ್ಣ"ವಾಗಿತ್ತು. ಯಾವುದಾದರೇನು?

"ಕನ್ನಡ ಸಾಹಿತ್ಯ ಸಂಘದ'' ದ ಸಹಾಯಾರ್ಥ ದುಡ್ಡು ಹೋದ ರಾಯಿತಲ್ಲ" ಎಂದನು ಸತ್ಯ. ಒಳಗೆ ಕೂತಮೇಲೆ ಇನ್ನೂ ವೇಳೆಯಿತ್ತು. ನಾಟಕದ ಆರಂಭ ಭಾಷಣದಲ್ಲಿ ಸಂಘದ ಅಧ್ಯಕ್ಷರು ನಟಪ್ರವೀಣ ರಾಜಾ ರಾಯರ ಸೇವೆಯನ್ನೂ ನಾಟಕ ರಂಗಕ್ಕೆ ಸಲ್ಲಿಸಿರುವ ಕಾಣಿಕೆಯನ್ನೂ ಹೊಗಳಿದರು. ಸತ್ಯನಿಗೂ, ಜಯರಾಮನಿಗೂ ಈ ಹೆಸರಿನ ಪರಿಚಯ ಇದ್ದೇ ಇತ್ತು. ಆದರೆ ಅದೇ ರಾಜನಹುದೋ ಅಲ್ಲವೋ ಎಂಬುದು ಅವ ರಿಗೆ ಕಷ್ಟವಾಯಿತು. ನಾಟಕದ ಕೊನೆಯ ಅಂಕದಲ್ಲಿ ಕಲಿ ಕರ್ಣ ತಾಯಿಯ ಮಾತಿನ ಮಧ್ಯೆಸಿಕ್ಕಿ ಒದ್ದಾಡುವ ದೃಶ್ಯ ರಾಮನಿಗೆ ಕಣ್ಣಲ್ಲಿ ನೀರು ತರಿಸಿತು.

''ಕನ್ನಡ ನಾಟಕದಲ್ಲಿ ಎಷ್ಟು ಆವೇಶ ಆದೇಶವಿದೆ" ಎಂದಳು ಸರೋಜ. ಸತ್ಯ ಗಂಭೀರವಾಗಿದ್ದ. ನಾಟಕ ಮುಗಿದರೂ ರಾಮನ ಆ ಉದ್ವೇಗ ಇಳಿದಿರಲಿಲ್ಲ ''ಸತ್ಯ, ಆ ರಾಜಾರಾಯನನ್ನು ನೋಡಿಯೇ ಬಿಡೋಣ. ನನ್ನ ತಮ್ಮನೇನೋ" ಎಂದ. ಇಬ್ಬರೂ ಹೊರಟರು. ಗ್ರೀನ್ ರೂಮಿನಲ್ಲಿ ಇನ್ನೂ ಕಿರೀಟಧಾರಿಯಾಗಿಯೇ ಇದ್ದ ರಾಜ. ಮೀಸೆಗಳು ಇದ್ದ ದ್ದರಿಂದ ರಾಮನಿಗೆ ಕೆಲಕಾಲ ನಿಲ್ಲುವ ಪ್ರಸಂಗ ಬಂತು. ಕೊನೆಗೆ ತಮ್ಮನ ಗುರುತು ಹತ್ತಿ ''ರಾಜಾ'' ಎಂದು ಸಂತೋಷಭರದಿಂದ ಅಪ್ಪಿಬಿಟ್ಟ. ರಾಜ

ನಿಗೆ ಗುರುತು ಹತ್ತಿದ್ದರೂ, ಉರಿಯುವ ಕೆಂಗಣ್ಣುಗಳಿಂದ ದಿಟ್ಟಿಸಿ ರಾಮನನ್ನು ಹಿಂದಕ್ಕೆ ನೂಕಿ, "ದೂರ ನಿಲ್ಲು. ನಮ್ಮಂಥವರನ್ನ ಮುಟ್ಟಬಾರದು ನೀವೆಲ್ಲಾ. ನಾವೆಲ್ಲಾ ಮನುಷ್ಯರೇ ಅಲ್ಲ-ನಿಮ್ಮಂಥ ಧನಿಕರಿಗೆ. ಬರೀ ಕೆಲಸಕ್ಕೆ ಬಾರದ ದೊಂಬಿದಾಸರು. ಹೋಗಾಚೆ. ನನ್ನ ಅಣ್ಣನೆಂದು ಹೇಳಿಕೊಳ್ಳಲು ನನಗೇ ನಾಚಿಕೆಯಾಗುತ್ತೆ" ಎಂದು ಮತ್ತೊಂದು ಕಡೆ ಹೋದನು. ರಾಮನಿಗೆ ತೇಜೋವಧೆಯಾದಂತಾಯಿತು. ಸತ್ಯನು ಮತ್ತೆ ರಾಜನ ಬಳಿ ಹೋಗಿ, "ಇದೇನು ರಾಜು ಹೀಗೆಲ್ಲಾ ಮಾತಾಡಿವರೆ! ಬೇಡ ಬಾ, ಅವನಾಗಿಯೇ ಬಂದಿರುವಾಗ ನೀನು ಹೀಗೆಲ್ಲಾ ಮಾಡಬಾರದು ದೊಡ್ಡ ಮನುಷ್ಯನಾಗಿ" ಎಂದನು.

"ಹೌದು ರಾಯರೇ, ನಮ್ಮ ಜಾತಿಗೆ ಸೇರಿದವನಲ್ಲ ಅವನು"

"ಅಂದರೆ ಯಾವ ಜಾತಿ?"

"ಹಣದ ಜಾತಿ. ಹಮ್ಮು, ಕೀಳು ಕಲೆಗಾರರು ನಾವು."

"ಥೂ ಅವೆಲ್ಲಾ ಮಾತಾಡಬೇಡ ಬಾ. ಹೋಗೋಣ ನಮ್ಮ ಧಾಮಕ್ಕೆ"

ಇವರು ಬರುವ ಹೊತ್ತಿಗೆ "ಧಾಮ" ದಲ್ಲಿ ಎಷ್ಟೋ ಜನ ಕಾದು ನಿಂತಿದ್ದರು. ರಾಜನೆಂದ "ಸತ್ಯನಾರಾಯಣರಾಯರೇ, ನನ್ನದಿಷ್ಟು ಕಾಣಿಕೆ ಇರಲಿ ಇದಕ್ಕೆ. ಎಲ್ಲವೂ ಸಾರ್ವಜನಿಕರಿಂದ ಬಂದದ್ದು, ಅವರಿಗೇ ಹೋಗಲಿ. ನನ್ನದು ಬರಿಯ ಸೇವೆ ಮಾತ್ರ" ಎಂದು ೧೦೦೧ ರೂಪಾಯಿ ಚೆಕ್ಕು ಬರೆದು ಬಿಟ್ಟ. ಅವನು ಇದರ ವಿಚಾರವಾಗಿ ಎಷ್ಟೋ ಸಾರಿ ಕೇಳಿದ್ದ. ತನ್ನಂತೆಯೇ ಅದಕ್ಕೆ ನಿಸ್ವಾರ್ಥ ಕೆಲಸಗಾರರಿದ್ದಾರೆಂಬ ಅಭಿಮಾನದಿಂದ ಎಷ್ಟೋ ಸಾರಿ ಕೈಲಾದಷ್ಟು ದುಡ್ಡು ಕಳಿಸಿದ್ದ. ದೇಶದ ತುಂಬಾ ದೊಡ್ಡ ನಟನಾಗಿ ಹೆಸರು ಪಡೆದು ನಾಡಿಗೆ ಕೀರ್ತಿ ತಂದಿದ್ದ.

ಆಫೀಸಿನಲ್ಲಿ ಕುಳಿತಿರುವಾಗಲೇ ನರ್ಸ್ ಒಬ್ಬಳು ಓಡಿ ಬಂದಳು. "ಸಾರ್, ಕೊನೇವಾರ್ಡಿಗೆ ಬೇಗನೇ ಬನ್ನಿ" ಎಂದಳು. ಎಲ್ಲರು ಓಡಿದರೂ ಜಯರಾಮನಿಗೆ ಎದೆಯೇ ಹಾರಿಹೋಯಿತು. "ಅಮ್ಮಾ" ಎಂದೊದರಿ ಮೈಮೇಲೆ ಬಿದ್ದ. ತಲೆಯ ಬಳಿ ಇದ್ದ ಸೀತೆ ಧಿಗ್ಗನೆ ಎದ್ದಳು.

ಸೀತೆಗೂ ಕಣ್ಣಲ್ಲಿ ನೀರೂರಿತು. ರಾಜಾರಾಮ ದೂರದಲ್ಲಿ ಸುಮ್ಮನೆ ನಿಂತಿದ್ದ. "ಅಣ್ಣಾ" ಎಂದಳು. ರಾಜಾ ಅದೇ ಗಡುಸು ಧ್ವನಿಯಿಂದ "ಸೀತೆ'' ಎಂದನು. ಹೃದಯಗಳು ಒಂದಾಗಿದ್ದುವು. ಜಯರಾಮನೊಬ್ಬನೇ ತಾಯಿಯ ಮೇಲೆ ಬಿದ್ದಿದ್ದನು. ಒಂದು ಇಂಜೆಕ್ಷನ್ ಕೊಟ್ಟಮೇಲೆ ಶಂಕರಮ್ಮನಿಗೆ ಜ್ಞಾನ ಬಂದಂತಾಗಿ ಆಯಾಸದಿಂದ ಕಣ್ಣು ಬಿಟ್ಟಳು. ಮೊದಲು ಕಣ್ಣಿಗೆ ಬಿದ್ದವನು ರಾಮ.

''ರಾಮು, ಕೊನೆಗೂ ಬಂದು ಬಿಟ್ಟೆಯಲ್ಲಪ್ಪ ಮಗೂ. ಅವರಿರುವ ವರೆಗೂ ನಿನ್ನನ್ನು ಬಹಳ ನೆನಸಿದರು. ಸುಖವಾಗಿರು ಕಂದ. ಮಂಜು ಎಲ್ಲಿ?"

"ಪಾಪಿಯಮ್ಮಾ ನಾನು,ಇರುವ ವರೆಗೂ ನಿನ್ನನ್ನು ತಿರಸ್ಕರಿಸಿ ಬಿಟ್ಟೆ. ಮಕ್ಕಳಿಂದ ಏನೂ ಸುಖ ಪಡೆಯಲಿಲ್ಲವಲ್ಲಮ್ಮಾ ನೀನು.— ಅಮ್ಮಾ....'' ರಾಜು ಮುಂದರಿದ. ಶಂಕರಮ್ಮ ಅವನನ್ನು ನೋಡಿ ಬರೀ ಮುಗುಳು ನಕ್ಕಳು. ಅಷ್ಟೇ.

"ಅಮ್ಮ ನಮ್ಮಿಂದ ನಿನಗೇನೂ ಸಹಾಯವೇ ಆಗಲಿಲ್ಲವಲ್ಲವೇ ! ಬೇಕಾದಷ್ಟು ಜನರಿಗೆ ಸಹಾಯ ಮಾಡಿದೆ. ನಿಮಗೆ ಮಾಡಲಿಕ್ಕಾಗಲಿಲ್ಲ. ಅದೇ ನನ್ನ ದ್ರೋಹವಾಯತು. ನನ್ನ ಉತ್ಸಾಹದಲ್ಲಿ ಎಲ್ಲವನ್ನೂ ಮರೆತು ಬಿಟ್ಟಿದ್ದೇನಮ್ಮ" ಎಂದು ಕಾಲು ಹಿಡಿದನು.

"ಅಣ್ಣಾ, ನಿನ್ನಿಂದ ಜಗತ್ತಿಗಾದರೂ ಉಪಕಾರವಾಯಿತಲ್ಲ. ಇದೋ ನಾವಿದ್ದೇವೆ. ನಮ್ಮಿಂದ ಏನಾಯಿತು ? ನೀನಾದರೋ ಮನೆತನಕ್ಕೇ ನಾಡಿಗೇ ಕೀರ್ತಿ ತಂದಿದ್ದೀಯ" ಎಂದಳು ಸೀತೆ. ಶಂಕರಮ್ಮನೂ ಎಚ್ಚರ ತಪ್ಪಿದ್ದಳು. ರಾಮ ಅವಸರದಿಂದ ಗಂಗೋದಕ ಬಿಟ್ಟ. ರಾಜನೂ ಬಿಟ್ಟ. ಸೀತೆಯ ಮೂರನೇ ಗುಟುಕಿಗೆ ಶಂಕರಮ್ಮನ ಉಬ್ಬಸ, ಕೆಮ್ಮು ಉಕ್ಕಿ ಬಂದು ಐದು ನಿಮಿಷ ಎಡೆಬಿಡದೆ ಕಾಡಿಸಿತು.

"ಸುಖವಾಗಿರಿಯಪ್ಪ. ಸೀತೆ–ರಾ ಮು, ರಾ....ಜ'' ಅಲ್ಲಿಗೆ ಮುಕ್ತಾಯವಾಯಿತು. ಇಲ್ಲಿಯ ವರೆಗೂ ತಡೆದಿದ್ದ ರಾಮನ ಕಣ್ಣೀರು ಕಟ್ಟೆಯೊಡೆಯಿತು. ರಾಜ ಸುಮ್ಮನೆ ನೆಲದ ಮೇಲೆ ಕುಳಿತು ಬಿಟ್ಟ. ಸೀತೆಯೂ ಮುಖ ಮುಚ್ಚಿದಳು. ಸತ್ಯನೇ ಶಂಕರಮ್ಮನ ದೇಹದ ಮೇಲೆ ಬಟ್ಟೆ ಹೊದಿಸಿದ. "ಏಳು ರಾಮು, ಆದುದಾಯಿತು. ಎಂದು ಸತ್ಯನೂ ಕಣ್ಣೀರು ತೆಗೆದ.

# ಸಿರಿಗನ್ನಡ ಮಹಾಭಾರತ (ವಚನ)

**ಲೇಖಕರು : ಎಂ. ಹರಿದಾಸರಾವ್**

**ಬೆಲೆ : ೩—೦—೦**

—[ಹದಿನೆಂಟು ಪರ್ವಗಳೂ ಇವೆ]—

ಭಾರತೀಯರ ಶ್ರುತಿ, ಸ್ಮೃತಿ, ಪುರಾಣ, ಇತಿಹಾಸಗಳೆಲ್ಲೆಲ್ಲ **"ಭಾರತವು"** ಮುಖ್ಯ. ಮತ್ತು ಆದರಣೀಯ ಮಹಾಕಾವ್ಯವಾಗಿದೆ. ಅವನ್ನು ಪಂಚಮ ವೇದವೆಂದೂ ಕರೆಯುವರು. ವೇದಗಳನ್ನು ವಿಂಗಡಿಸಿದ ವ್ಯಾಸನೇ ಭಾರತದ ಮೂಲಕವಿ.

**"ಮಹಾಭಾರತ"**ವು ಅಂದಿನ ದೊಡ್ಡ ಯುದ್ಧದ ಕಥೆಯಾಗಿದೆ. ಆದರೆ ಅದರಲ್ಲಿ ಧರ್ಮ, ನೀತಿಗಳಿವೆ. ಯೋಗಿಗಳ, ತ್ಯಾಗಿಗಳ, ವೀರರ, ರಾಕ್ಷಸ ವೃತ್ತಿಯ, ಉಗ್ರ ಜನರ ಕಥೆ ಕಥಾನಕಗಳು. ಇವೆ. ಭಾವ, ರಸ, ಪಾತ್ರ ವೈವಿಧ್ಯಗಳಿಂದ ಅದು ಅಮೋಘ ಹಾಗೂ ಅದ್ವಿತೀಯ ಗ್ರಂಥ.

ಆದಿ ಭಾರತಕ್ಕೂ ಪ್ರಚಲಿತ ಭಾರತಕ್ಕೂ ಮಹದಂತರವಿದೆ. ವಿವಾದಾತ್ಮಕ ಹಾಗೂ ಅಲ್ಲಸಲ್ಲದ ಅನೇಕ ವಿಷಯಗಳು ಪ್ರಚಲಿತ ಭಾರತದಲ್ಲಿ ಸೇರಿಕೊಂಡಿವೆ. ಜೈನ, ಬುದ್ಧ, ಬ್ರಾಹ್ಮಣ ಮುನಿಗಳೂ ಕವಿಗಳೂ ತಂತಮ್ಮ ಧರ್ಮಬುದ್ಧಿಯಿಂದ ಅನೇಕ ವಿಷಯಗಳನ್ನು ಕೂಡಿಸಿ ಬರೆದುದೇ ಅದಕ್ಕೆ ಕಾರಣವಾಗಿದೆ. ಆಮುದರಿಂದ ದೇಶೀ ಹಾಗೂ ವಿದೇಶೀ ಪಂಡಿತರು ಅದರ ಬಗ್ಗೆ ಬಹಳ ಸಂಶೋಧನೆ ವಿಮರ್ಶೆಗಳನ್ನು ಮಾಡಿರುವರು.

ಈ **"ಸಿರಿಗನ್ನಡ ಮಹಾಭಾರತ"**ದಲ್ಲಿ ಅಂತಹ ಅನೇಕ ಹೊಸ ವಿಷಯಗಳಿವೆ. ಇದರಲ್ಲಿ ಹದಿನೆಂಟು ಪರ್ವಗಳೂ ಇವೆ. ಮುಖ್ಯ ಕಥೆಯನ್ನೇ ನಿರೂಪಿಸಲಾಗಿದೆ. ಅನವಶ್ಯ ವಿಷಯಗಳಿಲ್ಲ. ಸುಲಭವಾದ ಶೈಲಿ. ಆದುದರಿಂದ ಆಬಾಲ ಸ್ತ್ರೀಪುರುಷರೆಲ್ಲರಿಗೂ ಇದು ಅರ್ಥವಾಗುವಂತಿದೆ. ಶಾಲಾ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಓದಲನುಕೂಲವಾಗುವಂತೆ ಕೂಡಾ ಎಚ್ಚರಿಕೆಯಿಂದ ಬರೆಯಲಾಗಿದೆ.

ಬರೆಯಿರಿ :

# ಸರ್ವೋದಯ ಸಾಹಿತ್ಯಮಾಲೆ ಹುಬ್ಬಳ್ಳಿ

# ಸರ್ವೋದಯ ಸಾಹಿತ್ಯಮಾಲೆ, ಹುಬ್ಬಳ್ಳಿ

ಸಂಪಾದಕರು ಮತ್ತು ಪ್ರಕಾಶಕರು : **ಎಂ. ಹರಿದಾಸರಾವ್**

**ಆರಂಭವಾದುದು]** **[೧೫, ಅಗಸ್ಟ್, ೧೯೪೮**

- ಅಗಸ್ಟಿನಿಂದ ಅಗಸ್ಟಿಗೆ ವರುಷ
- ವರುಷಕ್ಕೆ ನಾಲ್ಕು ಗ್ರಂಥಗಳು
- ಮೂರು ತಿಂಗಳಿಗೊಂದು ಗ್ರಂಥ
- ಕತೆ, ಕಾದಂಬರಿ, ನಾಟಕಗಳು

**ವಾರ್ಷಿಕ ಚಂದಾ ರೂ. ೫** (ಅಂಚೆ ವೆಚ್ಚ ಸೇರಿ)

## ಪ್ರಕಟವಾದ ಪುಸ್ತಕಗಳು

| | | |
|---|---|---|
| ಕ್ರಿಸ್ಮಸ್ ಕಾಣಿಕೆ ಮತ್ತು ಇತರ ಕಥೆಗಳು | | ೧—೦—೦ |
| ಬದುಕಿನ ದಾರಿ | (ಸಾಮಾಜಿಕ ಕಾದಂಬರಿ) | ೧—೮—೦ |
| ಮರುಭೂಮಿಯ ಅರಬರು | (ರಾಜಕಾರಣ) | ೧—೮—೦ |
| ನಂದಾದೀಪದ ನಂದಿನಿ | (ವಿಜಯಲಕ್ಷ್ಮಿ ಪಂಡಿತರ ಚರಿತ್ರೆ) | ೧—೪—೦ |
| ಅವರು ಯುದ್ಧಕ್ಕೆ ಹೋಗಲಿಲ್ಲ | (ಕಥಾ ಸಂಗ್ರಹ) | ೧—೦—೦ |
| ಬಾಳಿನ ಗಿಡ | (ಸಾಮಾಜಿಕ ಕಾದಂಬರಿ) | ೨—೧೨—೦ |
| ರಾಧೆಸ್ | (ಕಲಾ ಸಂಕಲನ) | ೧—೦—೦ |
| ವಾಸನಾ | (ಸಾಮಾಜಿಕ ಕಾದಂಬರಿ) | ೧—೦—೦ |
| ಧಾರವಾಡದ ಪುಡುಗಿ | (ಸಾಮಾಜಿಕ ಕಾದಂಬರಿ) | ೧—೮—೦ |
| ಉಕ್ಕಿನ ಮನುಷ್ಯ—ಸ್ಟ್ಯಾಲಿನ್ | (ಜೀವನ ಚರಿತ್ರೆ) | ೨—೦—೦ |
| ಬೇತಾಳಗಳ ಕುಣಿತ | (ವಿಡಂಬನ) | ೧—೦—೦ |
| ಆ ಸುಂದರಿಯ ಗಂಡ | ([illegible] ಕತೆಗಳ ಅನುವಾದ) | ೦—೧೨—೦ |
| ಹುಚ್ಚರ ಮನೆ | (ಸಾಮಾಜಿಕ ಕಾದಂಬರಿ) | ೧—೮—೦ |
| ಕಿರಿಗನ್ನಡ ಮಹಾಭಾರತ | (ಸಂಪೂರ್ಣ-ವಚನ) | ೩—೦—೦ |
| ಇಂದಿನ [illegible]ಪ್ಪಾಯಿನ್ಸ್ | (ಒಡಿ ಪುಷ್ಪ—ರಾಜಕಾರಣ) | ೦—೩—೦ |
| ನವರತ್ನದ ಕಡಗ | (ಸಣ್ಣ ಕತೆಗಳು) | ೧—೦—೦ |
| ಮಾತೃಶ್ರೀ | (ಕಾದಂಬರಿ) | ೧—೪—೦ |
| ಕಾವ್ಯದ ಕಾರಖಾನೆ | ("ಎನ್ಕೆ" ಏಕಾಂಕ ನಾಟಕಗಳು) | (ಅಚ್ಚಿನಲ್ಲಿ) |
| ಕೈ ಹಿಡಿದ ಕಾವೇರಿ | (ಕಾದಂಬರಿ) | (ಅಚ್ಚಿನಲ್ಲಿ) |

Editor and Publisher : ***M. Haridas Rao***

**Sarvodaya Sahityamala, Hubli**